ಕಡಲಸೀನಾಡುವಗ ತಾ[೧]ನ[೧]ನ
ಪಡರಿಪಂತಾಯ್ತು[೨]ಕಟಕಟ[೨]
ಮಡಿವಳಯ್ಯನ ಮಾತಮುದು ತಪ್ಪೆನ್ನದೆಂದೆನುತೆ
ನಡೆದು ಶಿವಗಣಸಹಿತವಲ್ಲಮ
ನಡಿಯೊಳತಿಭಯಭಕ್ತಿಯಲಿ ತ
ನ್ನೊಡಲನೀಡಾಡಿದನು ಭರದಲಿ ಬಸವದಂಡೇಶ || ೨೦ ||

ನಾನು ಮರೆದಯು ಮರುಳು ಸಂತತ
ನೀನೆಯರಿವಿನ ತಿರುಳು ತಿಳಿಪೊಡ
ನಾನು ರಂಜಕನಹಿತರರಿಯಲು ನೀ ನಿರಂಜಕನು
ನಾನು ಭಾವಿಸ ಪಶು ವಿಚಾರಿಸ
ನೀನು ಪಶುಪತಿಯೆನ್ನ ತಪ್ಪನು
ನೀನೆ ತಿದ್ದುವುದೆನುತೆ ಪೈಯಿಕ್ಕಿದನು ಬಸವಣ್ಣ || ೨೧ ||

ಭ್ರಮಿಸಿಪೆನು ನಾನೆನ್ನ ಮ[೩]ದ[೩]ದಲಿ
ಕ್ಷಮಿಸುವುದು ನೀ ನಿನ್ನ ಗುಣದಲಿ
ರಮಣರಾದವರೆನ್ನ ಕೊರತೆಯ ನೋಡಬೇಡೆನುತ
ವಿಮಳಮತಿ ಭಯಭಕ್ತಿ[೪]ಸಹಿತ[೪]
ಲ್ಲಮನ ಪಾದಸರೋಜದಲಿ ನೆರೆ
ನಮಿಸುತಿರ್ದನು ಬಸವದಂಡಾಧೀಶನಡಿಗಡಿಗೆ || ೨೨ ||

ಶಿಶುಗಳಲಿ ಗುಣದೋಷವನು ಭಾ
ವಿಸುವರೇ ಕರುಣದಲಿ ಮಿಗ ರ
ಕ್ಷಿಸುವ ಮೋಹದ ತಂದೆ-ತಾಯಿಗಳಾ ಪ್ರಕಾರದಲಿ
ಬಸವರಾಜಗ ಮಾತೆ ಪಿತ ನೀ
ನೊಸೆದು ಕರುಣಿಸಬೇಕೆನುತೆ ವಂ
ದಿಸುತಲಿದ್ದನು ಚೆನ್ನಬಸವನು [೫]ಅಲ್ಲಮನ ಪದಕೆ[೫] || ೨೩ ||

೧ ತೊ (ಇ) ೨ ಕಟಕಟ ದಿಟ (ಇ), ಕಟನೋಳ್ಪರೆ (ಗ) ೩ ನ (ಅ, ಇ, ಉ, ಕ, ಚ) ೪ ಯುಲಿಯ (ಒ, ಜ) ೫ ಅಲ್ಲಮಪ್ರಭುವ (ಕ, ಜ, ಮ), ಪಾಧೀಶ ನಲ್ಲಮಗೆ (ಗ)

ಅರಿಗಳಿದಿರಲಿ ತಪ್ಪಿದೊಡೆ ಸಂ
ಗರದೊಳೂಣೆಯವಪ್ಪುದಲ್ಲದೆ
ಗರುಡಿಯಲಿ ಕೈವೊಱೆದೊಡಾವುದು ಕೊಱತೆಯದಱಿಂದೆ[1]
ಗುರುವೆ ಬಾಲಾಭ್ಯಾಸಭಕ್ತಿಯ
ಪರಿಚರಿಯ[2]ದೊಣೆಯವ[3] ನೋಡದೆ
ಕರುಣಿಸೆನುತಲ್ಲಮಗೆ ಪೈಯಿಕ್ಕಿದನು ಮಾಚಯ್ಯ ॥ ೨೪ ॥

ತನ್ನ ಕಾಯವೆ ಲಿಂಗ ನೆಟ್ಟನೆ
ತನ್ನ [4]ಜೀವಿ[5]ತ ಚಾರುಜಂಗಮ
ತನ್ನ ತಾ[4]ನೇ ತಿಳಿದ[4] ಬಸವಣ್ಣಂಗೆ ನಿಮ್ಮಡಿಗ
ಭಿನ್ನಬಾವನೆ[5] ಯಾವುದೈ ನಾ
ಕಿನ್ನು ಕೃಪೆಮಾಡೆನುತಲಾಗಳು[5]
ಕಿನ್ನರಿಯ ಬೊಮ್ಮಣ್ಣ ಬಿ[6]ನ್ನವಗೈದನ[6]ಲ್ಲಮಗೆ ॥ ೨೫ ॥

ಶ್ರುತಿಗ[7]ನಿಲುಕದ ಸಕಲ[7]ಶಾಸ್ತ್ರ
ಸ್ಮೃ[8]ತಿಗ ಸಿಕ್ಕದ ವಿವಿಧ ಮುನಿಗಳ
ಮತಿಗೆ ಮೈದೋಱದ ಮಹಾಘನಮಹಿಮ ನೀನೊಲಿದು
ಕ್ಷಿತಿಗೆ ಬಸವನಿಮಿತ್ತ ಬಂದಿ
ನ್ನತಿಗಳೆಯಬೇಡೆನುತೆ ದೇವಗೆ
ಸ್ತುತಿಸಿ ಮೈಯಿಕ್ಕಿದರು ಶಿವಗಣವ[9]ಯ್ತು ತಮತಮಗೆ ॥ ೨೬ ॥

ನೋಡಿದೈ ರಾಮಯ್ಯ ಭಕ್ತರು
ಮಾಡುವುದು ತಾನೊಂದು ಮಿಗೆ ಮಾ
ತಾಡುವುದು ಬೇಱೊಂದು ಜಂಗಮವೊಲಿದು ನಡೆತರಲು
ಪಾಡನೇ ಸರುರವಿಸಿ ನುಡಿವ ಸ
ಗಾಡಿಕೆಯನೊಡ್ಡಯಿಸಿ ತಮ್ಮಯ
ಖೋಡಿಯನು ತಾವಱಿಯರೆಂದನು ನಗುತೆ ಪ್ರಭುರಾಯ ॥ ೨೭ ॥

೧ ಡರಕಿನ್ನಾವ ಕೊರತೆಗಳು (ಇ) ೨ ವೆರಡಹುದ (ಗ) ೩ ಜ್ಞಾನ (ಇ)
೪ ಸರಿದಾತ (ಅ), ನಿಂತರಿದ (ಇ, ಉ), ನಿಂತಳಿದ (ಕ, ಖ, ಮ) ೫ ಯುಂಟೆ
ಕೃಪೆಯಿಂದಿನ್ನು ರಕ್ಷಿಸಬೇಕೆನುತಲಾ (ಗ) ೬ ನ್ನೈಸಿದನು ಅ (ಅ, ಕ, ಗ)
೭ ದುರ್ಲಭವೆನಿಪ (ಅ) ೮ ಸ್ತು (ಅ, ಕ) ೯ ಲ್ಲ (ಅ, ಗ)

ಸಲಹಬೇಕೆಂದಖಿಳಭಕ್ತರಿ
ಗೊಲಿದು ನೀನೇ ಲೀಲೆಯಿಂದಲಿ
ಸುಲಭವಾಗಿಯೆ ಸುಳಿದ ಬಳಿಕಿನ್ನವರ ಗತಿಸುತಿಯ
ಹಳಿವನೆಣಿಸುವುದೇನುಕಾರಣ
ವೆಲೆ ಮಹಾತ್ಮನೆ ಕರುಣಿಸೆನುತಲಿ
ಸಲುಗೆಯಲಿ ಬಿನ್ನೈಸುತಿರ್ದನು ಸಿದ್ಧರಾಮಯ್ಯ ॥ ೨೮ ॥

ದೇವ ದೇವಾ ಸಿದ್ಧರಾಮಯ
ದೇವರೆಂದೋವಾದಿಯಲಿ ಮು
ನ್ನಾವ ಭಕ್ತಿಯ ಕಂಡು ಬಿಜಯಂಗೆಯ್ದೆ ನಮಗೊಲಿದು
ಪಾವನವ ಮಾಡಲಿಕೆ ಬಂದಿ
ನ್ನಾವ ಕೊರತೆಯನೆಣಿಸದೆಮ್ಮನು
ಕಾವುದೆನುತಲಿ ಮತ್ತೆ ಮಣಿದನು ಬಸವನಲ್ಲಮಗೆ ॥ ೨೯ ॥

ಮುನ್ನ ನಿರುಪಾಧಿಯಲಿ ಕರುಣಿಸಿ
ನಿನ್ನ ಲೀಲೆಯಲೊಲಿದು [1]ನೀ ಬಂ
ದಿನ್ನುಪಾಧಿಯನಱಿಸುವದು ಮರಿಯಾದೆಯಲ್ಲೆ[1]ನುತೆ
ಚೆನ್ನಬಸವನು ಹಿರಿಯಬಸವನು
ಮನ್ನಣೆಯ ಶಿವ[2]ಭಕ್ತ[2]ರೆಲ್ಲರು
ಬಿನ್ನಹವ ಮಾಡಿದರು [2]ಮಹಿಮರು ಮತ್ತೆ ತಮತಮಗೆ[2] ॥ ೩೦ ॥

ಮಾತನೇ ಪುಕರಿಸಿದರಲ್ಲದೆ
ಜಾತಿಭಕ್ತಿಯ [3]ಹೋದ[3] ಹೊಲಬಿನ
ರೀತಿಯನು ತಾವಱಿಯರಾವಿನ್ನು ಚಿತ[4]ಭಕ್ತಿಯನು[4]
ಈತಗಳಿಗಱುಹಿಸಲು ಬೇಕೆನು
ತೋತು ಬಳಿಕೆಮ್ಮಲ್ಲಮಪ್ರಭು
ಪಾತಗಳಿಗಿಂತೆಂದು ನುಡಿದನು ಪುತ್ತೆ ಕರುಣದಲಿ ॥ ೩೧ ॥

೧ ಬಂದಿರಿ। ಯೆನ್ನ ಕೊರತೆಯನೆಣಿಸದೆಮ್ಮನು ಕಾಯಬೇಕೆ(ಇ) – ಶರಣ(ಇ)
೨ ತಮತಮಗೈದೆ ಭಕ್ತಿಯಲಿ (ಗ), ಮಂಗಳಮೂರ್ತಿಯಲ್ಲಮಗೆ (ಜ)
೩ ಭಾವ (ಇ) ೪ ವಚನದಲಿ (ಗ)

ನಡೆವಳಿಗಳೇನಾದೊಡಾಗಲಿ
ನುಡಿವಳಿಯಲತಿ ಜಾಣರಾದಿರಿ
ಪೊಡವಿಯಲಿ ಸೀವಹುದು ಮುಝು ಭಾಪೆನುತೆ ನಸುನಗುತೆ
ನಡೆಯಿರೈ ಶಿವಲಿಂಗಭಕ್ತಿಯ
ಬೆಡಗನೇಕಾಂತದಲಿ ನಿಮಗೊಡ
ಬಡಿಸಿ ಹೇಳುವೆನೆನುತೆ ಬಂದನು ಬಳಿಕ ಪ್ರಭುರಾಯ || ೩೨ ||

ಅಂತು ಗತಿ ೧೪ಕ್ಕಂ ಪದ ೬೪೪ಕ್ಕಂ ಮಂಗಳಂ

# ೧೫ ಮರುಳುಶಂಕರದೇವರ ಗತಿ

ಸೂಚನೆ

ಮರುಳುಶಂಕರದೇವರಿಗೆ ನಿಜ
ಪರಮಪದವಿಯನಿತ್ತು ಮೆಚ್ಚಿಸಿದನು
ಧರಣಿಯಚ್ಚರಿಯಲು ಗುರು ಗುಹೇಶ್ವರ ಲಿಂಗಲೀಲೆಯಲಿ

ಕರಣವೆಲ್ಲವು ಕರಗಿಯಂತಃ
ಕರಣ[1]ಶುದ್ಧಿಯ ಪಡೆದು[1] ಸಲೆ ಶಂ
ಕರನ ಸಾಧಕರೊಕ್ಕುಮಿಕ್ಕುದನುಂಬ ಮಹಿಮಂಗೆ
ಗುರುವೆ ಪ್ರತ್ಯಕ್ಷದಲಿ ಕರುಣಿಸಿ
ಪರಮಪದವಿಯನೀವ ಭೇದವ
[2]ಶರಣರಲ್ಲರು[2] ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

ನಿಂದು ನಿಲ್ಲದ ನೆಲಕೆ ನೆಟ್ಟನೆ
ಹೊಂದಿ ಹೊಂದದ ರೂಪು ರೇಖೆಗ
ಬಂದು ಬಾರದ ಸಚ್ಚಿದಾನಂದೈಕರಸಮಯನ
ವಂದಿಸುತೆ ನಾನಾಪ್ರಕಾರಗ
ಳಿಂದಲೂಳಕಡಗಾಗಿ ತನ್ನಯ
ಮಂದಿರಕೆ ನಡೆಗೊಳಿಸಿದನು ಬಸವಣ್ಣ ಭಕ್ತಿಯಲಿ ॥ ೨ ॥

ಬರುತೆ ಕಂಡನು ಪರಮಪಾವನ
ಕರದ ಪಾಪಕ್ಷಯದ ಭವಭೀ
ಕರ[3]ವನಳಿದ[3] ಮಹಾಪ್ರಸಾದದ ಕುಂಡತೀರದಲಿ
ಇರುಳು-ಹಗಲೆಡವಿಡದೆ ಸೇವಿಪ
ಮರುಳುಶಂಕರದೇವರನು ನಿಜ
ಕರುಣದಲಿ ಬಸವಣ್ಣನರಮನೆಯೊಳಗೆ ಪ್ರಭುರಾಯ ॥ ೩ ॥

೧ ವನು ಶುದ್ಧಿಯಿಂಸಿ (ಜ) ೨ ಹರುಷದಿಂದವೆ (ಉ) ೩ ವೆನಿಸುವ (ಒ)

ಅಲ್ಲಮಪ್ರಭು ಬರುತೆ ಕಾಣುತೆ
ಮೆಲ್ಲಮೆಲ್ಲನೆ ಬಂದು ತನುಮನ
ವೆಲ್ಲವನು ಕವಿದೊಕ್ಕು ೧ಸಾಷ್ಟಾಂಗಪ್ರಣತನಾಗಿ೧
ಪಲ್ಲವಿಸಿ ಪರಿಣಮದ ಪಸರಣೆ
ಯಲ್ಲಿ ಹಿಗ್ಗುತೆ ಭಕ್ತಿಭಾವದ
ಬುಲ್ಲವಣೆಯಲಿ ಮರುಳುಶಂಕರದೇವನಿಂತೆಂದ || ೪ ||

ಗುರುವ ಕಂಡೆನು ಎನ್ನ ಭಾಗ್ಯದ
ತರುವ ಕಂಡೆನು ಎನ್ನ ಮುಕ್ತಿಯ
ಸಿರಿಯ ಕಂಡೆನು ಚಾಗು ಮಝು ಭಾಪೆನುತಲಡಿಗಡಿಗೆ
ಕರಣಗಳು ಪರಿಣಮಿಸಿ ಹರ್ಷೋ
ತ್ಕರುಷದಲಿ ಹಾರಯ್ಸಿ ಹೆಚ್ಚುತೆ
ಮರುಳುಶಂಕರದೇವ ಸ್ತುತಿಸಿದನಲ್ಲಮಪ್ರಭುವ || ೫ ||

ಶಿಲೆಯ ಮರೆಯಲಿ ಹೊನ್ನು ನೆಟ್ಟನೆ
ತಿಲದ ಮರೆಯಲಿ ತೈಲ ಭಾವಿಸೆ
ನೆಲದ ಮರೆಯೆ ನಿಧಾನವಿಹವೊಲು ಮರುಳ ವೇಷದಲಿ
ಬಳಿಯಲಿರೆ ನಾಕಾರಶಂಕರ
ನೆಲಸಿ ತನ್ನಂಗಣದಲಾತನ
ಹೊಲಬನರಿಯನು ಬಸವನೆನುತಲ್ಲಮನು ಬೆರಗಾದ || ೬ ||

ಪ್ರೇಮದಿಂದಲಿ ಮರುಳುಶಂಕರ
ನಾಮದಲಿ ಶಂಕರನೆ ಬಂದಿರ
ಭೂಮಿಜನರು ತಾವರಿಯರಾಡಂಬರದ ಭಕ್ತಿಯಲಿ
ತಾಮಸವ ತಕ್ಕೈಸಿ ಸಾತ್ವಿಕ
ಸೀಮೆಯನು ತಾವರಿಯಲರಿಯರು
ರಾಮ ನೋಡನುತಲ್ಲಮಪ್ರಭುರಾಯನಿಂತೆಂದ || ೭ ||

೧ ಶಿರೆ ಸಾಷ್ಟಾಂಗವೆರಗಿಪನು (ಜ) ೨ ಪರಿ (ಇ) ೩ ನ (ಜ)

ಭಾವಿಸಲು ಎವಲಿಂಗಭಕ್ತಿಯ
ನಾವ ಪರಿಯಲಿ ಮಾಡಬೇಕಂ
ಬಾ ವಿಧಾನವನಱಿಯದುದ್ದೇಶದಲ ಮಾಡಿದೊಡ
ಪಾವನೆಯಲಡಿಯಿಡುವನಂತೆಯು
ದಾವ [1]ವಾರವನೈದಲಿಬಲ್ಲದು
ದೇವನೀ ಪರಿ ಸಿಕ್ಕುವನೆ ರಾಮಯ್ಯ ಕೇಳೆಂದ ‖ ೮ ‖

ಅಱಿಯಬೇಕಾರಾವ ವೇಷದ
ಮಱೆಯಲಿಹರೋ ವ್ಯೇಣು ಲಿಂಗದ
ಬೆಱಗಿನಲಿ ಕಂಡವರ ಕಣ್ಣಿಗ ಮರುಳರಾಗಿಹರೊ
ಮೆಱೆವ ಭಕ್ತರ ಮನವ ನೋಡಲು
ಮಱೆಸಿಹರೊ ದಿಟವಿವನು ತಿಳಿಯದೆ
ಲಿಬಱಿವೆ ಬಹುದೇ ಭಕ್ತಿಸುಖ ರಾಮಯ್ಯ ಕೇಳೆಂದ ‖ ೯ ‖

ಗುರುವೆ ಬಿನ್ನಹ ನಿನ್ನನೊಲಿಸುವ
ಪರಿಯ ಭಕ್ತಿಯ ಮಾಡಿ ಮೆಚ್ಚಿಸಿ
ವರವ ಹಡೆಯಲದಾರು ಬಲ್ಲರು ಭಾವಿಸಲು ನಿನಗೆ
ಶರಣು ಶರಣೆಂದೆಂಬಶಬ್ದ
ಸ್ಮರಣೆಯಿಂದಲಿ ಪುದ್ಧರಲ್ಲದೆ
ಹಿರಿದು ಮಾತೇಕೆನುತಲಿದ್ದನು ಸಿದ್ಧರಾಮಯ್ಯ ‖ ೧೦ ‖

ನಿನ್ನ ಕೃಪೆಯುಳ್ಳವನೆ ಭಕ್ತನು
ನಿನ್ನ ಕೃಪೆಯುಳ್ಳವನೆ ಯುಕ್ತನು
ನಿನ್ನ ಕೃಪೆಯುಳ್ಳವನೆ ಮುಕ್ತನು ದಿಟ ವಿಚಾರಿಸೊಡೆ
ನಿನ್ನ ಕೃಪೆಯೊಂದಿಲ್ಲದಿರೆ ವಿ
ಶ್ವನ್ಯಭಕ್ತಿಯೊಳೇನು ಫಲವು
ನಿನ್ನ ಕರುಣವ [2]ಕಾರಣವಲಾ ಗುರುವೇ ಕೇಳೆಂದ ‖ ೧೧ ‖

೧ ಭಕ್ತಿಯನ್ನದ (ಜ ಮು) ಪರಿ ರುಸನ್ಯ (ಗ ) ಎಲ್ಲಿಯು ಎಕ್ತಿಯಲೇನ ಪುಪು (ಗ) ೩ ಕಾರಣವು ಗುರುರಾಯ (ಬ), ... ೩
ಪ್ರ ಲಿ ೧೦ ೮

ಲೇಸು ಭಕ್ತಿಯು ಬಂಧುತನದಭಿ
ಲಾಷೆಯಿಂತಿರಬೇಕು ಮರ್ತ್ಯರ
ಹೂಸಿ ೧ಹುಂಡರ೧ ನಡವಳಿಯು ಸೀನೊಪ್ಪವಿಟ್ಟಿಯಲಾ
ಐಸ ಮತ್ತೇನಹುದು ದಿಟ ಸೀ
ನೀಸುವ್ರೂಲವರಕಾಣೆನೆಂಬುದ
ನೀಸುದಿನ ನಾವಱಿಯಮ್ಮೈ ರಾಮಯ್ಯ ಕೇಳೆಂದ || ೧೨ ||

ವಸುಮತಿಯ ಶಿವಭಕ್ತರೆಸಗುವ
ಕುಸಲದೊಯ್ಯಾರವನು ನಮ್ಮ
ಮನುಳಿಸಿದ ಮತಿಗಱಿಯ೨ಬಹುದೇ೨ ನಾಕದಂತಿರಲಿ
ಅಸಮಶಂಕರನೆಂಬ ಮಹಿಮನ
ಹೂಸ ಪರಿಯ ರೀತಿಯನು ಸಮಗಱು
ಓಸಲುಬೆಕೆನುತಲ್ಲಮನ ಕೇಳಿವನು ರಾಮಯ್ಯ || ೧೩ ||

ಮರುಳುಶಂಕರನೆಂಬನಱಿಪಿನ
ತಿರುಳು ಲಿಂ೩ಗಾಗಮದ೩ ಹೊಳಪಿನ
ಹುರುಳು ಸರ್ವಿಳಧರ್ಮಮರ್ಮದ ಚಾರುಚಾರಿತ್ರ
ನಿರುತ ಶಾಂತಿಯ ಚಿತ್ತವೃತ್ತಿಯ
ಪರಮಪಾವನಮೂರ್ತಿಯಾತನ
ಪರಿಗಳನುವನುತರ ಕಣಾ ರಾಮಯ್ಯ ಕೇಳೆಂದ || ೧೪ ||

ಶೀವಿ ತನ್ನೊಂದುವರಕೋಸುಗ
ಪಾಪ ಕೃತ್ಯವ ಮಾಡುತಿರ್ದೊಡ
ಜೀವಜಾಳಕ ನೋವು ತಪ್ಪದೆನುತ್ತ ಕರುಣದಲಿ
ಭಾವಿಸುತೆ ಶಿವಲಿಂಗಭಕ್ತರು
ಸೇವಿಸಿದ ಶೇಷಪ್ರಸಾದವ
ಪಾವಿಸಿದ ಮಹಾತ್ಮನೀತನು ರಾಮ ಕೇಳೆಂದ || ೧೫ ||

೧ ಶಾಪದ(ಗ) ೨ ಪಾಠ (ಗ) ೩ ಗಾ ಗದಲಿ (ಇ)

ಕಾಮದಲಿ ಕಣ್ಗೆಡದೆ ಕ್ರೋಧ
ಸ್ತೋಮದಲಿ ಮುಂಗೆಡದೆ ಲೋಭದ
ಸೀಮೆಯಲಿ ಸಿಕ್ಕದೆ ವಿಮೋಹದ ಒಲಿಗೆ ೧ಬಗೆ೧ಗುಡದೆ
ಆ ಮದೋನ್ನತಮತ್ಸರಂಗಳ
ನೇಮಿಸದೆ ಲಿಂಗಪ್ರಸಾ೨ದ
ಪ್ರೇಮಿಯಾ೨ದ ಮಹಾತ್ಮನೀತನು ರಾಮ ಕೇಳೆಂದ ॥ ೧೬ ॥

ಕೇಳುವಾಳೋಕಿಸುವ ರುಚಿಸುವ
ಲೀಲೆಯಿಂ ಕಂಪಱಿವ ಸೋಂಕುವ
ಕಾಳು ವಿಷಯೇಂದ್ರಿಯದ ತವಕ೩ವ ತೆಗೆದು೩ ತರಹರಿಸಿ
೪ಬಾಳಿಕೆಗೆ ನಿರ್ಬಾಧಕದ ಸಂ
ಮೇಳವೆಂದೀ೫ಶ ಪ್ರಸಾದದ
ಮೇಲೆ ಮಚ್ಚಿದ ಮಹಿಮನೀತನು ರಾಮ೪ ಕೇಳೆಂದ ॥ ೧೭ ॥

ತರಣಿಯುದಯಿಸೆ ರತ್ನಕಾಂತಿ
ಸ್ಫುರಣೆ ಕಣ್ಗೆದಿರಾಗಿ ತೋಱುವ
ಪರಿಯಲಾನೀ ಮರುಳುಶಂಕರನೆಂಬ ಪುರುಷನನು
ಗುರುವೆ ನೀನ್ನೈತರಲು ಕಂಡೆನು
ಪರಮಪಾವನ ನಾನಲಾ ಹರ
ಹರ ಎನುತೆ ಪರಿಣಮಿಸುತಿರ್ದನು ಬಸವದಂಡೇಶ ॥ ೧೮ ॥

ಬಸವ ನಿನ್ನಯ ಭಕ್ತಿವೃಕ್ಷದ
ವಸರಣೆಯನಾತ್ರೈಸಬೇಕೆಂ
ದೊಸೆದು ಬಂದ ಮಹಾತ್ಮರಗಣಿತವವರೊಳೀತಂಗೆ
ವಸುಮತಿಯೊಳೆಣೆಗಾಣೆನಿಂತ
ಪ್ಪಸಮರೆಲ್ಲರು ನಿನ್ನ ಬಾಗಿಲ
ಮುಸುಂಕಿಱಿಕೊಂಡಿಹರಾಗಿ ನೀನೆ ಕೃತಾರ್ಥನಹುದೆಂದ ॥ ೧೯ ॥

೧ ಮನ (ಗ) ೨ ದಪ। ಸೀಮೆಯರಿ (ಜ) ೩ ದ ತಗಹ (ಉ, ಜ) ೪-೪ ಕೇಳು ಮಾಡಿಯೆ ಲಿಂಗದಲಿ ನಾಮ್ಮೇಳದಲಿ ಸರ ಬೆರೆದನೀತನು। ಹೇಳುವರ ಸಾಮಾನ್ಯನೇ ರಾಮಯ್ಯ (ಇ) ೫. ಸು (ಅ, ಬ), ಸತ್ (ಕ, ಗ, ಜ) ೬. ಕಿ (ಇ)

ದೇವ ನಿನ್ನೊಲಿದನ ಕೃತಾರ್ಥನು
ಭಾವಿಸಲು ನೀನಾಡಿಸುವ ನೂ
ತ್ರಾವಳಿಯ ಬೊಂಬೆಗಳು ನಮಗುಂಟೇ ಸ್ವತಂತ್ರಗುಣ
ನೀವ ಬಲ್ಲಿರಿ ನಿಮ್ಮ ಮಹಿಮೆಯ
ನಾವು ಬಲ್ಲೆವೆ ಎನುತಲಲ್ಲಮ
ದೇವರಿಗೆ ಬಿನ್ನೈಸುತಿರ್ದನು ಬಸವದಂಡೇಶ || ೨೦ ||

ಮನವ ನೋಡುವೆನೆಂದು ನಿನ್ನನು
ಕನಲಿಸೆವು ನಾವಿನ್ನು ಬರ ನಿನ
ಗಿನಿತು ಮುನಿಸಿನ ಮೊಳಕೆ ಸೈದೋರುಸದ ಪರಿ ಲೇಸು
ವನಮುಖನು ನೀನಹುದು ನಮತಯ
ನೆನಹು ನಲಿಸಿತು ಜಾಗು ಜಾಗೆಂ
ದೆನುತ ಬಸವನ ಹೊಗಳುತಲ್ಲಮಲಿಂಗನಿಂತೆಂದ || ೨೧ ||

ಕಾರಣವ ಬಲ್ಲವರಿಗಱಿಯಲು
ಧಾರುಣಿಯಲೀ ಬಸವಸಂಗಣ
ವಾರಣಾಸಿವಿಮುಖ್ಯತೀರ್ಥಕ್ಷೇತ್ರದಿಂದಧಿಕ
ಊರು ಪಡೆವರು ಭಕ್ತರಿಕ್ಕೆಯ
ನಾರಿ ಸದ್ಗತಿ ಪಡೆವುವೆನು ನಿ
ರ್ಧರಿಸಲು ನಾವೂನ್ಯರೇ ರಾಮಯ್ಯ ಕೇಳೆಂದ || ೨೨ ||

ದೇವ ನಿನ್ನಯ ಕರುಣವೇ ನಂ
ಭಾವಿಸಿದ ಕಾರಣದಲಾನೀ
ಭೂವಳಯದಲಿ ಬಸವಮುಖ್ಯಸಮಸ್ತಭಕ್ತರನು
ತೀವಿ ಕಂಡು ಕೃತಾರ್ಥನಾದೆನಿ
ದಾವ ಪುಣ್ಯದ ಫಲವೊ ಶಿವ ಮಾ
ದೇವ ಎನುತಲಿ ಹಿಗ್ಗುತಿರ್ದನು ಸಿದ್ಧರಾಮಯ್ಯ || ೨೩ ||

[illegible] ೪ (ಗ) ೨ [illegible] )

ಬಸವರಾಜನ ಭಕ್ತಿಯನು ಒ
ಜ್ಜನುಪ್ಪುಡಾತನ ಭಕ್ತಿಯನು ಲಿ
ಕ್ಕನುಪ್ಪುಡಾರಿಪಗಣತನವಲಾ ಕೇಳ್ ಸಿದ್ಧರಾಮಯ್ಯ
ಪಸರಿಸುವದಂತಿರಲಿ ನಾವಿ
ನ್ನಸಮಶಂಕರಗೈಕ್ಯವದನಿಯ
ನೊಸದು ಕೊಡಬೇಕೆನುತಲಲ್ಲಮಲಿಂಗನಿಂತೆಂದ ॥ ೨೦ ॥

ಇಂದ್ರಿಯವನತಿಗಳದನಳುಪಿಸ
ದಂಮುಗವ ಧಿಕ್ಕರಿಸಿದನು ಭವ
ಬಂಧನದ ಬೇರಿಂಗ ಕಿಚ್ಚಿಕ್ಕಿದನಲಾ ಎನುತೆ
ಅಂದು ಬಳಿಕಾ ಮರುಳುಶಂಕರ
ತಂದೆಯನು ತಾನೊಲಿದು ಪರಮಾ
ನಂದದಿಂ ನೋಡಿದನು ನಮ್ಮಯ ಗುರು ಗುಹೇಶ್ವರನು ॥ ೨೧ ॥

ಹಲವು ಯುಗಯುಗ ಜನ್ಮಜನ್ಮಂ
ಗಳಲಿ ಸಾಧಿಸಿ ಭೇದಿಸುವಗ ಸಿ
ದ್ಧಳನಿರಾಕುಳಸಿದ್ಧಶಿವತತ್ವಾನುಭಾವನಯ
ಫಲವನೊಂದೇ ನಿಮಿಷದಲಿ ನೆಱೆ
ನಿಲಿಸಿ ನಿಜಪದವಿಯನು ಕೊಟ್ಟನು
ಸುಲಭದಲ ಶಂಕರಗೆ ನಮ್ಮಯ ಗುರು ಗುಹೇಶ್ವರನು ॥ ೨೨ ॥

ಆಡಿ ಕೆಲರಿಗೆ ಕರುಣವಲಿ ಮಾ
ತಾಡಿ ಕಲರಿಗೆ ನುಡಿಸಿ ಕೆಲರಿಗೆ
ನೋಡಿ ಕೆಲರಿಗ ಜಱದು ಕೆಲರಿಗೆ ಜಡಿದು ಕೆಲಬರಿಗೆ
ಹಾಡಿ ಕಲರಿಗೆ ಹರಸಿ ಕಲರಿಗೆ
ಕೂಡಬಲ್ಲನು ನಿತ್ಯ ಸುಖವನು
ರೂಢಿಯೊಳು ಘನಮಹಿಮನೆಮ್ಮಯ ಗುರು ಗುಹೇಶ್ವರನು ॥ ೨೩ ॥

**ಅಂತು ಗತಿ ೧೫ಕ್ಕಂ ಪದ ೬೭೧ಕ್ಕಂ ಮಂಗಳಂ**

ಸಪ ೮)೨ ಕೇಳುತ। ಪಿಡಿದಿಜೆ ಯನಿತ್ತು ತುಷ್ಟಿಯ ಬಡಿಸಿ ಕೆಲರಿಂಗ॥ ನೋ
ಡಿ ಕೆಲರಿಗ ಜಱೆಪ ಕೆಲರಿಗೆ। ರೂಢಿಗಚ್ಚರಿವಡಿಸಿ ಮುಕ್ತಿಯ। ಗಾಡಿಸಿದ ನಮ್ಮ
ಗುಹೇಶ್ವರಲಿಂಗಲೀಲೆಯುಲಿ॥(ಇ)೩ ಮಾ(ಜ)೪ ಳಗೆಮ್ಮಲ್ಲಮಪ್ರಭು(ಉ ಗ)

# ೧೬. ಇಷ್ಟಲಿಂಗದ ಗತಿ

ಸೂಚನೆ

ಬಸವ ಮೊದಲಾಗಿರ್ದ ಭಕ್ತರಿ
ಗೊಸೆದು ಲಿಂಗದ ಮಾರ್ಗವನು ಬೋ
ಧಿಸಿದನೆಮ್ಮಯ ಗುರು ಗುಹೇಶ್ವರ ಲಿಂಗಲೀಲೆಯಲಿ

ನಿಷ್ಠೆ ೧ನೆಲಸಿರೆ೧ ಮೊಟ್ಟಮೊದಲಲಿ
ಯಿಷ್ಟಲಿಂಗದ ಭಕ್ತಿಮಾರ್ಗದ
ಶಿಷ್ಟತೆಯ ಶೀಲವನು ಸಕಲಾಗಮದ ಸಾರವನು
ಕಷ್ಟಕರ್ಮಭ್ರಮೆಯ ಕೇಡನು
ದೃ೨ಷ್ಟಜನ್ಮದಲಿರ್ದು ಕಾಂಬರೆ
ಶ್ರೇಷ್ಠಭಕ್ತರು ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

ಮರುಳುಶಂಕರಗೈಕ್ಯಪದವಿಯ
ಪರುಟವಿಸಿ ಕೂಟಸ್ಥಲವಿನಿಂದಲಿ
ಪರಿಮಿತಾಲಯಕೆಯ್ದಿ ಪರಮಾನಂದ೩ಲೀಲೆ೩ಯಲಿ
೪ಕರುಣೆ೪ ಮಿಗೆ೫ ೬ನಡೆ೬ತಂದು ಬಸವೇ
ಶ್ವರನು ಮಾಡುವ ಭಕ್ತಿಯುಕ್ತಾ
ದ೭ರಣೆಯನು ಕೈಕೊಳುತಲಿರ್ದನು ಗುರು ಗುಹೇಶ್ವರನು ॥ ೨ ॥

ಮಣಿಖಚಿತ ಮಂಗಳದ ಪರುಷದ
ಕಣಿಯ ಪೀಠದ ಮೇಲೆ ನೆಱೆ ನಿ
ರ್ಗುಣದ ನಗುಣದ ನಿರ್ಮಲದ ನಿರ್ವಾಣಗುರುವಿರಲು
ಎಣಿಸಬಾರದ ಬಹುಳಭಕ್ತಿಯ
ಗಣನೆಯಲಿ ಕೈಮುಗಿದು ವೆಹೌಳಿಯ
ಮಣಿದು ಮಹಿಮೆಗೆ ಬಸವ ಬಿನ್ನಹಮಾಡಲನುಗೆಯ್ದು ॥ ೩ ॥

೧ ಯಲಿ ನೆಱೆ ನಿಲಿಸಿ(ಆ) ೨ ದು(ಉ, ಖ, ಚ) ೩ ಮಹಿಮೆ(ಅ, ಕ, ಚ,) ೪–೪ ಹರುಷ (ಗ) ೫–೫ ಕರುಣಿಸಿಯೆ (ಜ) ೬. ಯ್ಯೆ (ಉ, ಜ.) ೭ ಚ (ಮು.)

ಕುರುಡ ಕನ್ನಡಿವಿಡಿದ ಮಾಟದ
ಪರಿಯಲಿದೆ ಶಿವಭಕ್ತಿಯೆಂಬುದು
ಮರುಳು ಕಂಡಾ ಕನಸಿನಂತಿರೆ ಮಾತಿಗರಿದಾಯ್ತು
ಗುರುವೆ ನಾನಿದನರಿವವೊಲು ವಿ
ಸ್ತರಿಸಿ ಪೇಳೆಂದೆನುತಲಾ ವರ
ಗುರು ಗುಹೇ[೧]ಶಗೆ ಬಿನ್ನಹವ ಮಾಡಿದನು ಬಸವಣ್ಣ[೨] ||೪||

ಚಾಗು ಭಲರೇ ನೀನಹುದು ನಿಗ
ಮಾಗಮಂಗಳ ಸತ್ವಸಾರವ
ನಾಗುಮಾಡಲು ಬಂದ ಕಾರಣಪುರುಷ ನೀ[೩]ನೆನುತೆ[೩]
ಆಗಳಾ ಪ್ರಶ್ನೆಗೆ ಮನೋಮುದ
ವಾಗಿ ಮೆಚ್ಚುತಲಲ್ಲಮಪ್ರಭು
ವಾ ಗುಣಾರ್ಣವ ಬಸವದಂಡಾಧೀಶಗಿಂತೆಂದ ||೫||

ಭಾವಿಸಲು ಭಾಸ್ಕರನ ಬಟ್ಟೆಗೆ
ದೀವಿಗೆಯ ಹಂಗೇಕೆ ತಿಳಿವೊಡೆ
ಪಾವಕನ ಪಸಿವಿಂಗೆ ಪಚನಾರಂಭವಿಧಿಯೇಕೆ
ಆ ವಿಚಾರತೆಯಂತೆ ನಿನಗಿ
ನ್ನಾವ ಬೋಧೆಗಳ ಪ್ರಯೋಜನ
ದೈವಪುರುಷನು ನೀ ಕಣಾ ಬಸವಣ್ಣ ಕೇಳೆಂದ ||೬||

ಹರ ಹರಾ ನಾನಾರು ನಿನ್ನಯ
ಚರಣ[೪]ಶರಣರ ಶರಣರೊಳು[೪] ಕಿಂ
ಕರರ ಕಿಂಕರ ನಾನೆಲ್ಲೈ ಎನಗಿಲ್ಲಿವರಿಯಂತ
ಗುರುವೆ ಭರಭಾರವನು ಹೊರಿಸಲು
ಕರುಣವಿಲ್ಲವೆ ನಿನಗೆಯೆನುತಲಿ
ನಿರುತನಿರಹಂಕಾರನಿಧಿ ಬಸವಣ್ಣನಿಂತೆಂದ ||೭||

೧ ಶ್ವರಲಿಂಗನಿಗೆ ಬಿನ್ನೈಸಿದನು ಬಸವ (ಇ) ೨ ತ (ಇ, ಉ ಋ ಗ)
೩ ನ ಘಘ (ಜ) ೪ ಕಮಲವನರ್ಚಿಸುವ (ಖ)

ಬಿತ್ತಿ ಬೆಳೆಯುದ ಮುನ್ನ ನೊಳಕಯು
ಕಿತ್ತು ನೋಡುವರೆ ವೃಥಾ ಸಾ
ನೆತ್ತಲೀ ಸ್ತುತಿಯೆತ್ತ ಶಿವ ಶಿವ ಗುರುವೆ ನೀ ಬಲ್ಲೆ
ಚಿತ್ತವಿಸು ಮನ್ಮನದ ಮಧ್ಯದ
ಕತ್ತಲೆಯ ಕಳೆದೞ ವಿನರ್ಕನ
ತತ್ತಿನನ್ನೊಳಗೆನುತಲಿರ್ದನು ಬಸವದಂಡೇಶ || ೮ ||

ಸುಧೆಯ ನಿರುಪಮರುಚಿಗೆ ಬೇಞೊಂ
ದಿದಿರ [೧]ಸವಿ[೧]ಗಲಿಸುವರ ಆದರೆ
ಹದನ ನೀ ಕೇಳಿದರ ನಾವದನಲ್ಲವೆನಲೇಕೆ
ವಿದಿತನಿರಹಂಕಾರಿ ನಿನಗ
ಲ್ಲದೆ ಬಳಿಕ್ಕಿನ್ನಾರಿಗ್ಯ ಲಿಂ
ಗದ ಮಹಾಸೇವಾನುಭವಸುಖ ಬಸವ ಕೇಳೆಂದ || ೯ ||

ತಿಳಿವೊಡೀ ಮಾಯಕದ ಜನ್ಮಂ
ಗಳ ಶರೀರಗಳಪ್ರಯೋಜನ
ಕುಲಗಳಾಗಿಹುವಲ್ಲಿ ಮಾನವದೇಹವವೞೊಳಗೆ
ಸಲುವ ಕರ್ಮಂಗಳಿಗೆ ಕರ್ತನು
ಗಳಿಸಿ ಕೊಡುವುದು ಪುಣ್ಯ ಪಾಪಂ
ಗಳನು ಮುಂದಕೆ ಬಸವದಂಡಾಧೀಶ ಕೇಳೆಂದ || ೧೦ ||

ಮನುಜದೇಹಿಗಳಾದರೆಯು ತನು
ಮನಗಳಲಿ ಪಟುವಾಗಿ ದುರ್ವಾ
ಸನೆಯು ಬುದ್ಧಿಗೆ ನಿಲುಕದಿಹುದರಿದಾ ಶರೀರದಲಿ
ಅನಿತಱೊಳಗೆಚ್ಚತ್ತು ಜನ್ಮದ
ಜಿನುಗಿಗಾನಿನ್ನಾಱೆನೆಂಬಾ
ಮನುಜನೇ ಕೃತಕೃತ್ಯನಹನೈ ಬಸವ ಕೇಳೆಂದ || ೧೧ ||

೧ ಮಚಿ (ಉ)

ಹಾಲು ಹಯನುಳ್ಳಲ್ಲಿ ಹಬ್ಬವ
ಹೇಳದೆಯು ಕೇಳದೆಯು [1]ಸವೆವು[1]ದು
ಗಾಳಿ ಬೀಸುವ ದಿನದಲೇ ತೂಱುವುದು ಹೊಟ್ಟುಗಳ
ಕಾಲು ಕೈ ಕಣ್ಣುಗಳು ತನುವಿಹ
ಕಾಲದಲಿ ಕಾಲನ ನಿವಾರಿಸಿ
ಮೇಲುಗತಿಯ[2]ಈಸು[2]ವನೆ ಜಾಣನು ಬಸವ ಕೇಳೆಂದ ॥ ೧೨ ॥

ಅದು ನಿಮಿತ್ತದಲಾಗಮಂಗಳ
ಹೃದಯದಲಿ ಹುರುಳಱಿದು ತನ್ನಾ
ಗ್ರದಲಿ ಬುದ್ಧಿಯನಿಕ್ಕಿ ಗುರುಕಾರುಣ್ಯವನು ಪಡೆದು
ಮೊದಲು ತನು–ಮನ–ಧನದ ಮೇಲಣ
ಮದ–ವಿಮೋಹಾದಿಗಳನೆಲ್ಲವ
ಕೆದಱಿ ಕೆಡಿಸುವನವನೆ ಜಾಣನು ಬಸವ ಕೇಳೆಂದ ॥ ೧೩ ॥

ಪ್ರಾಣವಿದು ನೋಡೆಂದ ಪ್ರತಿ ಗುರು
ಪಾಣಿತಿಯ[3]ನಿ[3]ದಿರಿ[4]ಡಲು[4] ಕಣ್ಣಿಗೆ
ಕಾಣಿಸುವ ತನ್ನಿಷ್ಟಲಿಂಗವನತಿಸಮೇಳದಲಿ
ಮಾಣದಾಗಳು ಹಿಡಿದು ಹಿಂಗದೆ
ಕೇಣವಿಲ್ಲದೆ ನಿಂದ ನಿಷ್ಠೆಯ
ಜಾಣ[5]ನೇ ಶಿವ[5]ಭಕ್ತನಹನೈ ಬಸವ ಕೇಳೆಂದ ॥ ೧೪ ॥

ಕೆಯ್ಯೊಳಗೆ ಶಿವಲಿಂಗವಿರ್ಪೊಡೆ
ಮೆಯ್ಯ[6]ನೋಂಕ[6]ರಬೇಕು ವಸ್ತ್ರದ
ಹುಯ್ಯಲಿಗೆ ಹೂ–ಪತ್ರೆಗಳ ಜಂಜಡಕೆ ಜೋಂಪಿಸದೆ
ಒಯ್ಯನೀಕ್ಷಿಸಿ ತನ್ನಲಿಹ ಮೂ
ಮೆಯ್ಯ ವಸ್ತ್ರವ ಮಾಡುವನೆ ಜಗ
ದಯ್ಯನೆನಿಸುವ ಭಕ್ತನಹನೈ ಬಸವ ಕೇಳೆಂದ ॥ ೧೫ ॥

೧ ವಾಳ್ಪ (ಅ) ೨ ಜೀವ (ಕ) ೩ ಲಿ (ಇ, ಕ) ೪ ಟ್ಟು (ಇ)
೫ -ಪಸೆ (ಉ) ೬ ಕ-- (ಇ)

ಲಿಂಗದೇವಗ ತನ್ನಲಿಹ ಮೂ
ಱಿಂಗವೇ ವಸ್ತ್ರಂಗಳಾದೊಡ
ಲಿಂಗನೆನಹಿಸಲಹುದು ಸಕಲಾರಂಭವನು ಮಱೆದು
ಅಂಗಸುಖವನೆ ಬಯಸು¹ವೊಡೆ² ಶಿವ
ಲಿಂಗಪೂಜೆಯ ಮಾ³ಡುತಿಹುದಾ³
ಲಿಂಗಪೂಜೆಯ ಮಾಡುವಂದವ ಬಸವ ಕೇಳೆಂದ || ೧೬ ||

ಕರಣವಲಿ ಸಲೆ ಸಕಲಸಚರಾ
ಚರಚಯಂಗಳ ಮೇಲೆ ಕರಗುವ
ಕರುಣೆಯಾಗಿಯೆ ಬಳಿಕ ಲಿಂಗಕೆ ಮಜ್ಜನಕ್ಕೆಱೆದು
ಪರಮಶಾಂತಿಯ ಚಿತ್ತ ತನಗಾ
ವರಿಸಿದೊಡ ಲಿಂಗಕ್ಕೆ ಗಂಧವ
ನೊರೆಯ ಬಲ್ಲೊಡ ಭಕ್ತಸಹಸ್ರೈ ಬಸವ ಕೇಳೆಂದ || ೧೭ ||

ಕರ್ಮಗಳ ಕಡಗಣಿಸಿ ಯುಕ್ತಿಯ
ಪರ್ಮವನು ತಾನಱಿದು ಸಲೆ ಶಿವ
ಧರ್ಮದಲಿ ನೆಱೆ ನಿಲುವೊಡಕ್ಷತೆಯಿಂದಲರ್ಚಿಪುದು
ಕೂರ್ಮೆಯಿಂದಲಿ ತನ್ನ ಒಗಯನು
ನಿರ್ಮಲತೆಯೆನಿಸುವೊಡೆ ಪುಷ್ಪದ
ಮರ್ಮಪೂಜೆಯ ಮಾಡಕಲಿವುದು ಬಸವ ಕೇಳೆಂದ || ೧೮ ||

ಒಡಲ ದುರ್ಗುಣಗಣವನೆಲ್ಲವ
ಸುಡುವೊಡೀವುದು ಧೂಪಧೂಮವ
ನಿಡಿದ ತನುವಿನ ತಮವನಳಿಯಲು ಬಲ್ಲೊಡರ್ತಿಯಲಿ
ಬಿಡದೆ ಬಗೆ ಬಂದಿಸಿತು ದೀಪದ
ಗಡಣಗಳನೆತ್ತುವುದು ಭಕ್ತಿಯ
ಬೆಡಗನಱಿವಂಗಿನಿತುಬೇಹುದು ಬಸವ ಕೇಳೆಂದ || ೧೯ ||

೧ ವದು (ಉ) ೨ ಡ ಬೇಕಾದು (ಉ)

ರುಚಿವದಾರ್ಥವ ಲಿಂಗನೆನಹಿನ
ರಚನೆಯಲಿ ರಂಜಿಸಿದ ಬೋನವ
ಶುಚಿತನದಲಾಗೆನಿಸಿ ನೈವೇದ್ಯವನು ಮುಟ್ಟಿಸುತೆ
ಪ್ರಚುರವೆನಿಪಾನಂದನಹವಾ
ದುಚಿತದಗ್ಗವಣಿಗಳನೀಂಟಿಸ
ಲಚಲಭಕ್ತಿಯನಱಿವನಾತನು ಬಸವ ಕೇಳೆಂದ ‖ ೨೦ ‖

ಬಿಟ್ಟು ಸತ್ವರಜಸ್ತಮೋಗುಣ
ದೊಟ್ಟಲನು ಬಳಿಕಲ್ಲಿ ಲಿಂಗಕೆ
ಮುಟ್ಟಿಸು[೧]ಗೆ[೧] ತಾಂಬೂಲವನು ವಿತ್ತಾನುಸಾರದಲಿ
ನೆಟ್ಟನೀ ಪರಿ ಲಿಂಗನೆನ[೨]ಹೇ[೨]
ಗಟ್ಟಿಯಾದರೆ ಪ್ರಾಣಲಿಂಗದ
ಬಟ್ಟೆಯನು ಭೇದಿಸುವನಾತನು ಬಸವ ಕೇಳೆಂದ ‖ ೨೧ ‖

ಪ್ರಾಣನೆಂತಾ ಮೂಱು ತನುವಿನ
ಕೋಣೆಯೊಳಗಿಪ್ಪಂತೆ ಲಿಂಗಕೆ
ಮಾಣದೊಂದೊಳವಸ್ತ್ರವಿಪ್ಪ[೩]ಯ[೩]ನಜ್ಜ ನೇರಿಸಿದ
ಕಾಣಿಸುವ ಶಿವದಾರಸಹ ನಿ
ರ್ವಾಣದೊಳಗ[೪]ಳವಡಿ[೪]ಸ ಬಲ್ಲೊಡೆ
ಜಾಣ ಭಕ್ತಿಯನಱಿವನಾತನು ಬಸವ ಕೇಳೆಂದ ‖ ೨೨ ‖

ತಿಳಿ[೪]ವೊಡಾ[೪] ಶಿವದಾರ ಸಜ್ಜಗ
ಳಳ[೫]ವಡುವೊಡಾ[೫] ಮೂಱು ತನುವಿನ
ಮಲುಕಿನಂತಿರಲೊಂದಱಿಂದೊಂದು ಪಿರಿದಾಗಿ
ಲಲಿತವಸ್ತ್ರ[೬]ತ್ರಯವನೊ[೬]ಂದಿಸಿ
ಬಳಿಕಲವಱೊಳಗಿಷ್ಟಲಿಂಗವ
ನಿಲಿಸುವ[೭]ನೆ [೮]ಶಿವಭಕ್ತ[೮]ನಹನೈ ಬಸವ[೭] ಕೇಳೆಂದ ‖ ೨೩ ‖

೧ ತೆ (ಇ) ೨ ಪಮ (ಅ), ಹನ (ಇ,ಕ,ಗ) ೩ ವಧರಿ (ಆ,ಕ,ಜ) ೪ ವ್ರದೀ (ಉ) ೫ ಜಿದಿರಲ್ (ಗ) ೬ ವ ತನ್ನೊಳೂ (ಉ) ೭ ವನೇ ಭಕ್ತನೈ ಬಸವಣ್ಣ (ಇ) ೮ ಕೃತಕೃತ್ಯ (ಒ,ಜ)

ಪರಿವಿಡಿಯಲಿಂತಿಷ್ಟಲಿಂಗವ
ನಿ[೧]ರಿಸಿ ಗಂ[೨]ಟೆರಡೆ[೨]ರಡನಿಂತೀ
ಪರಿಯಲಿಕ್ಕುವುದೆರಡು ವಸ್ತ್ರಕೆ ಮೇಲುವಸ್ತ್ರವನು
ನಿರುತ ತನ್ನಂಗ[೩]ದಲಿ ಬಿಡದವ[೩]
ಧರಿಸಿಕೊಂಡಿರಬಲ್ಲನಾದೊಡೆ
ಪರಮಭಕ್ತಿಯನಱವನಾತನು ಬಸವ ಕೇಳೆಂದ || ೨೪ ||

ಮೂಱು ತನುವಿನಲಾ ಷಡುಸ್ಥಳ
ತೋಱುವಂತಿರೆ ಮೂಱು ವಸ್ತ್ರವ
ಬೇಱೆ ಮಾಡದೆ ಬಲಿದ ಬಳಿ[೪]ಕಿ[೪]ಡಿದಾಱುಗಂಟುಗಳು
ಮೀಱದಳವಡುತಿರ್ಪವಾದೊಡ
ನಾಱ ಶಾಶ್ವತಭಕ್ತಿ ನೆಲೆಗೊಂ
ಡೇಱ ತೊಡಗುವುದಾತನಲಿ ಬಸವಣ್ಣ ಕೇಳೆಂದ || ೨೫ ||

ಅಂಗವಿಸಲೀ ಪ್ರಾಣವಿದು ಶಿವ
ಲಿಂಗಪದಕೆ ತನುತ್ರಯಂಗಳ
ಸಂಗ್ರಹವೆ ವಸ್ತ್ರತ್ರಯಂಗಳು ಸಲೆ ಷಡುಸ್ಥಲದ
ಇಂಗಿತದಲಾ ಗ್ರಂಥಿಗಳು ವ
ಸ್ತ್ರಂಗಳಲಿ ಬಲಿದಂಗದಲಿ ನಿಲೆ
ಲಿಂಗಪದವನು ಕಾಂಬನಾತನು ಬಸವ ಕೇಳೆಂದ || ೨೬ ||

ಲಿಂಗವೇ ಪ್ರಾಣಸ್ವರೂಪೆಂ
ದಂಗವಿಸಿ ತಾನೋತು ಬಳಿಕಾ
ಲಿಂಗವನು[೫]ಬೇಱರಿಸಲಾಗದು ಭಕ್ತಿಭಾವುಕರು[೫]
ಅಂಗಸಂಗ[೬]ದಲಗಲದಂತಿರೆ[೬]
ಲಿಂಗಧಾರಣವಾದುದಾದರೆ
ಮಂಗಳಾತ್ಮಕನಾತನೇ ಬಸವಣ್ಣ ಕೇಳೆಂದ || ೨೭ ||

೧ ಧ (ಚ) ೨ ಟುಗಳೆ (ಅ), ಟಡಲೆ (ಉ) ೩ ದೊಳು ಲಿಂಗವ (ಉ)
೪ ವಿ (ಇ, ಕ) ೫ ತಾ ಹಿಂಗಲಾಗದು ಸಂಗಸಮರಸದಿ (ಇ) ೬ ದಿ ಹಿಂಗದಿ
ರ್ದೊಡೆ (ಇ)

ಪ್ರಾಣಲಿಂಗಕೆಯಿಷ್ಟಲಿಂಗ[೧]ದ[೧]
ಕಾಣಿಸಿದ ಷಡುರುಚಿಯ ದ್ರವ್ಯ
ಶ್ರೇಣಿಯನು [೨]ನೆಱೆ[೨] ಲಿಂಗನೆನಹಿನೊಳಿತ್ತು ತನ್ನೊಳಗೆ
ಮಾಣದಾ ಸಂತುಷ್ಟಿ ಸೌಖ್ಯ
[೩]ತ್ರಾಣವ[೩]ನು ಮಿಗೆ ತೃಪ್ತಿಲಿಂಗಕೆ
ಜಾಣಿಕೆಯಲೀವವನು [೪]ಚದುರ[೪]ನು ಬಸವ ಕೇಳೆಂದ || ೨೮ ||

ಪರಸಮಾಧಿಯಲೊಳಗೆ [೫]ಫಲಿ[೫]ಸುವ
ಪರಿಯಲೀ ಗುರುಲಿಂಗಜಂಗಮ
ಕರುಣಿಸಿದ ಪಾದೋದಕವನಾ ಸುಪ್ರಸಾದವನು
ಧರಿಸುತಿರ್ದೊಡ [೬]ಸತ್ಯ[೬] ಭಕ್ತಿಯ
ಪರುಟವಣೆಗಧಿಕಾರಿಯಾಗಿಯೆ
[೭]ಪರಮಪದವಿಯ ಪಡೆವನೈ ಬಸವಣ್ಣ[೭] ಕೇಳೆಂದ || ೨೯ ||

ಇಷ್ಟಗುರುವಿಗೆ ತನುವ ಸಲಿಸುತ
ಲಿಷ್ಟಲಿಂಗಕೆ ಮನವ ಸಲಿಸುತ
ಲಿಷ್ಟಜಂಗಮಕರ್ಥವನು ನಲೆ ಸ[೮]ಲಿ[೮]ಸ ಕಲಿತಂಗೆ
ದೃಷ್ಟ[೯]ವಹ[೯] ಗುರುಲಿಂಗಜಂಗಮ
ಶ್ರೇಷ್ಠವಾಗಿಯೆ ತನ್ನೊಳಗೆಯು
ತೃಷ್ಟವಾಗಿಯೆ ಕಾಣಿಸುವುದೈ ಬಸವ ಕೇಳೆಂದ || ೩೦ ||

ಇದ್ದ ನೆಲೆಗಳಪಡುವ ಭಕ್ತಿಯ
[೧೦]ಶ್ರದ್ಧೆಯಲಿ[೧೦] ವಿತ್ತಾನುಸಾರದ
ಹೊದ್ದಿಗೆಯನಱಿದಱಿದು ನಿರ್ವಂಚನೆಯನನುಕರಿಸಿ
ಬುದ್ಧಿಯಲಿ ತನುಮನದ ತವಕವ
ತಿದ್ದಿ ತಿಳಿ[೧೧]ದ[೧೧]ಳವಟ್ಟೊಡಾತನೆ
ಶುದ್ಧಭಕ್ತಿಯನಱಿವನೈ ಬಸವಣ್ಣ ಕೇಳೆಂದ || ೩೧ ||

೧ ಕೆ (ಅ) ೨ ಶಿವ (ಜ) ೩ ಶ್ರೇಣಿಯ (ಇ) ೪ ಭಕ್ತ (ಇ) ೫ ಬೆರ (ಖ), ಸಲಿ (ಗ) ೬ ಯಚ್ಚ (ಗ) ೭ ನೆರೆವನೆನ್ನನು ಬಳಿಕಲಾತನು ಬಸವ (ಜ) ೮ ವೆ (ಜ) ೯ ದಲಿ (ಇ) ೧೦ ಸಿದ್ಧಿಯನು (ಉ) ೧೧ ವ (ಉ)

ದಿಟ ವಿಚಾರಿಸಲಿಷ್ಟಲಿಂಗವ
ಘಟಿಸೆಯುಂಗುಟ ಸರ್ವಸಂಗವ
ಸಟವುಟಿಸಬೇಕಾಗಿಯಂತರ್ಮಾರ್ಗದೋವರಿಗೆ
ಪಟುವೆನಲು ಪತಿಯಾಗಿ ಮಾಯೆಯ
ಸಟೆಯನುಸ್ವವಿಚಾರಿಸುತಿವರ್ಸಂ
ಘಟಕೆ ಸಾಧನವನಿಸುವುದು ಬಸವಣ್ಣ ಕೇಳೆಂದ || ೩೨ ||

ಅದು ನಿಮಿತ್ತದಲಿಷ್ಟಲಿಂಗವೆ
ಮೊದಲು ಬೇಹುದು ನಿತ್ಯನಿರ್ಮಲ
ಪದವ ನಡಪಹೆನೆಂಬ ಪಾವನಬುದ್ಧಿವಂತಂಗೆ
ಹೃದಯದೊಳಗಾ ಪ್ರಾಣಲಿಂಗದ
ಹದನನರಿವೊಡ ಸಚ್ಚಿದಾನಂ
ದದಲಿ ನಿಲುವೊಡೆ ಮುಖ್ಯನಿದು ಬಸವಣ್ಣ ಕೇಳೆಂದ || ೩೩ ||

ತನ್ನ ತಾನಿಂತರಿವ ಭಕ್ತಿಯ
ಒನ್ನಣವ ತಾನರಿಯಲರಿಯದೆ
ಭಿನ್ನಭಾವಭ್ರಮೆಯಲೊಂದಾನೊಂದು ಕಲ್ಪನೆಯ
ಗನ್ನಗತಕದೊಳಿದ್ದನಾದೊಡ
ಮುನ್ನಿನಿಂ ಮಿಗಿಲಾಗಿ ಭವದೊಳು
ಬನ್ನಬಡುತಿಹನಾತನೈ ಬಸವಣ್ಣ ಕೇಳೆಂದ || ೩೪ ||

ಶಿವಯುತರ ಸಂಗವನು ಮಾಡದ
ಶಿವಯುತರ ಸಂಗತಿಯ ಕೇಳದ
ಶಿವಯುತರ ನಪಿದೊಕ್ಕುಮಿಕ್ಕುದ ಹಾರಿಕೊಂಡಿರದ
ಶಿವಯುತರ ನೆರೆನಂಬಿ ನಚ್ಚದ
ಶಿವಯುತರ ದಾಸೋಹಿಯಾಗದ
ಭವವಿಕಾರಿಗೆ ಭಕ್ತಿಯಹುದೇ ಬಸವ ಕೇಳೆಂದ || ೩೫ ||

೧ ಬೀ(ಉ) ೨ ಕೈ(ಅ,ಉ,ಗ) ೩ ತ(ಉ) ೪ ಪಾತಕತನದಲಿರ್ದೊಡೆ (ಇ, ಮು)

ಕಾಲನಿಯಮಗಳೆಂಬ ಕರ್ಮದ
ಕಾಲನರ್ಪನ ಬಾಯ್ಗೆ ಸಿಲ್ಕಿದ
ಶೀಲಶೀಲಗಳೆಂಬ ಶೂಲಕ ಸಿಕ್ಕಿ ನೊಂದವಗಾ
ಹಾಳು ಸಂಕಲ್ಪಸ್ರತಂಗಳ
ಕಾಳುಕಿಚ್ಚಿನಲುರಿಪ್ರತಿಹದು
ಶೀಲವಂತಗೆ ಭಕ್ತಿಯಹುದೇ ಬಸವ ಕೇಳೆಂದ | ೩೩ ||
ವಂದನೆಗೆ ಮೈಗೊಟ್ಟು ನಿಲ್ಲದೆ
ನಿಂದೆಗೆಡೆಗೊಟ್ಟೋಡಿ ಹೋಗದೆ
ಬಂದ ತಾಗು-ನಿರೋಧದಲಿ ಕಳವಳಿಸಿ ಕಂಗೆಡದೆ
ಹಿಂದು ಮುಂದಣ ನೆರವ ಹಾರದೆ
ನಿಂದ ಧೀರೋದ್ಧಾರಕೀಗಲ್ಲದೆ
ಹಂದೆಗಹುದೇ ಭಕ್ತಿಯೆಂಬುದು ಬಸವ ಕೇಳೆಂದ || ೩೬ |
ಬಲ್ಲವಣೆಯಲಿ ಮಾತನಾಡಲು
ಬಲ್ಲೆನೆನುತಲಿಯನುಭವಂಗಳ
ನೊಲ್ಲನೊಲ್ಲಿಗೆ ಮತ್ಸರಿಸಿ ಮಿಗೆ ಮತ್ತತನದಿಂದೆ
ಹೊಳ್ಳುಗಳೆದನ್ಯರನು ಮಿಗೆ ಮದ
ವಲ್ಲಿ ಬೆಬ್ಬನೆ ಬೆಳೆತು ಬೀಗುವ
ಖುಲ್ಲಗಹುದೇ ಭಕ್ತಿಯೆಂಬುದು ಬಸವ ಕೇಳೆಂದ || ೩೭ ||
ಕೋಪದುರಿಯಲಿ ಕೊರಗಿ ದರ್ಪದ
ತಾಪದಲಿ ಲಯವಾಗಿ ಮತ್ಸರ
ಕೂಪದಲಿ ಕುಕ್ಕುರಿಸಿ ಡಂಬಿನ ಸೀಮೆಯಲಿ ಸಿಲುಕಿ
ಲೋಪಬುದ್ಧಿಗೆ ಲೋಲನಾಗಿ ಮ
ಹಾಪರಾಧದಲುಕ್ಕಿ ಸೊಕ್ಕುವ
ಪಾಪಿಗಹುದೇ ಭಕ್ತಿಯೆಂಬುದು ಬಸವ ಕೇಳೆಂದ || ೩೮ ||

೧ ದ (ಕ, ಚ) ೨ ಬಿ (ಅ) ೩ ದಾತ್ತ (ಮ) ೪ ಕ (ಉ)

ಪಿಸುಣತೆಯ ಹಿಂಗಿಸಿ ಮನಸ್ಸಿನ
ಮುಸಕವನು ಮಾಣಿಸಿ ವಿಕಾರದ
ವಿಷಯವಿಧಿಗಳನುರೆ ವಿಸರ್ಜಿಸಿ ಭವಿಯ ಪರಿಹರಿಸಿ
ಮುಸುಱಿ[2] ಮುತ್ತಿದ ಸಟೆಯ ಸಡಿಲಿಸಿ
ಪಿಸಿನೆ[1] ಸತ್ಯವ ನುಡಿವಗಲ್ಲದೆ[1]
ಹುಸಿಯ ನುಡಿವಗೆ ಭಕ್ತಿಯಹುದೇ ಬಸವ ಕೇಳೆಂದ ॥ ೪೦ ॥

ಹುಟ್ಟಿದೆಡೆಯನು ಹೊರೆ ಹೊಂದುವ
ಬಟ್ಟೆಯನು ನೆರೆ[2] ಕೆಡಿಸಿ ಕರ್ಮದ
ಕಟ್ಟಳೆಯ[2]ನೊಡ[2]ಮುಟ್ಟಿ ಸಂತತ ಲಿಂಗಸೇವೆಯಲಿ
ಮುಟ್ಟಿ ಹಸು ತೃಷೆ ನಿದ್ರೆಯೆಂಬಿವ
ನಿಟ್ಟೊರಸಿದಾ[3] ಧೀರಗಲ್ಲದೆ
ಹೊಟ್ಟೆಹೊರಕಗೆ ಭಕ್ತಿಯಹುದೇ ಬಸವ ಕೇಳೆಂದ ॥ ೪೧ ॥

ಅದು ನಿಮಿತ್ತದಲಿಷ್ಟಲಿಂಗದ
ಸದಮಲದ ಸೇವಾನುಭಾವನೆ
ಹೃದಯದಲಿ ನೆಲೆಗೊಂಡು ಬಿಡದಳವಟ್ಟು ಬಲಿದಿರಲು
ವಿದಿತವೆನಿಪಾ ಪ್ರಾಣಲಿಂಗದ
ನಿಧಿಯ[4]ನಱುವಂಜನವು ನೇತ್ರಕೆ
ಹುದುವ[5]ಹುದೆಲ್ಪೈ ತನಗೆ ತಾನೇ ಬಸವ ಕೇಳೆಂದ ॥ ೪೨ ॥

ಹಲವು ಪರಿಯಿಂದೀ ಪ್ರಕಾರದ
ಲೊಲಿದು ತೋಱುಸುತಿಷ್ಟಲಿಂಗದ
ಸಲುವ ಮಾರ್ಗಕ್ರಿಯೆಯನಱುವಂತಿರೆ ನಿರೂಪಿಸಲು
ಸಲೆ ಹಸಾದವ ಸಲಿಸಿ ಬಗೆ ಮಿಗೆ
ತುಳುಕಲಲ್ಲಮಲಿಂಗದೇವಗೆ
ಬಳಿಕಲೊಯ್ಯನೆ ಬಸವದಂಡಾಧೀಶನಿಂತೆಂದ ॥ ೪೩ ॥

೧. ಸತ್ಯದಿ ನಡೆವಗಲ್ಲದೆ (ಮು.); ಸತ್ಯವ ನಡೆವಗಲ್ಲದೆ (ಏ.) ೨. ಕಡೆ (ಉ.)
(೩.) ದಳೆ (ಉ.) ೪. ವಿಧವ (ಉ.) ೫. ಗ (ಇ, ಜ.)

ನಿನ್ನ ಹೆಸರನು ಕೇಳಿದೊಡೆ ಮೇಣ್
ನಿನ್ನ ಮೂರ್ತಿಯ ನೋಡಿ ಕಂಡೊಡೆ
ನಿನ್ನ ನೆನೆದೊಡೆ ನಿನ್ನ ನೆಱೆದೊಡೆ[೧] ನಿನ್ನ ಹೊಗಳಿದೊಡೆ
ನಿನ್ನ ಭಜಿಸಿದೊಡವರು ಭಕ್ತಿಯ
ಬಿನ್ನಣವನಱಿದೈಕ್ಯರಹರೆನೆ[೨]
ನಿನ್ನ ಮಹಿಮೆಯನೇನನೆಂಬೆನು ಬಸವ ಕೇಳೆಂದ || ೫೬ ||

ಹುಸಿವುದೇ ಕ್ಷ್ಮೆ ನೆಲನ ಹೊಯ್ದರೆ
ಹುಸಿವುದೇ ಕಣೆ ಗಿರಿಯನೆಚ್ಚೊಡೆ
ಹುಸಿವುದೇ ಕೇಳೆನ್ನನಱಿದಿಹೆನೆಂಬ ನಿನ್ನಱಿವು
ಹುಸಿಯಲಱಿವುದೆ [೩]ನ[೪]ನ್ನ ಕಾರಣ
ವಸುಮತಿಗೆ ನೀ[೫] ಬಂದೆಯದಱಿಂ
ಹುಸಿಯ ಮಾಯೆಯ ಹುಸಿಸಿ ತೋಱುವೆ ಬಸವ ಕೇಳೆಂದ || ೫೭ ||

ಈ ತೆಱದೊಳ್[೬]ಱಿ[೭]ದಿಷ್ಟಲಿಂಗ
ಪ್ರೀತಿಮಾರ್ಗಾಚಾರವನು ವಿ
ಖ್ಯಾತಿಯುತ[೮] ಬಸವಣ್ಣ ಮೊದಲಾದಖಿಳಭಕ್ತರಿಗೆ
ಓತು ನಿಯಮಿಸಿ ನಿರ್ವಿಕಾರದ
ನೀತಿನಿಶ್ಚಯಭಕ್ತಿಮಾರ್ಗದ
ರೀತಿನಾಯಕನೊಪ್ಪುತಿರ್ದನು ಗುರು ಗುಹೇಶ್ವರನು || ೫೮ ||

**ಅಂತು ಗತಿ ೧೬ಕ್ಕಂ ಪದ ೭೨೯ಕ್ಕಂ ಮಂಗಳಂ**

೧. ಭಾವಿಸಿ (ಅ, ಪ.) ೨. ರೈ (ಉ, ಕ, ಗ.) ೩. ಯದು (ಇ, ಖ) ೪. ನಿ (ಇ, ಉ, ಚ.) ೫. ನಾ (ಇ, ಉ, ಚ.) ೬. ಸನ (ಅ, ಬ, ಗ, ಚ, ಜ.) ೭. ಕೊಲಿ (ಉ, ಖ.); ನನೊಲಿ (ಕ, ಎ.) ೮. ತನಹ (ಜ.)

## ೧೭ ಮಹಾದೇವಿಯಕ್ಕನಿಗೆ ಪ್ರಭು ಪ್ರಸನ್ನವಾದ ಗತಿ

**ಸೂಚನೆ.**

ಶರಣರೊಡೆಯನು ಪ್ರಾಣಲಿಂಗಾ
ಚರಣೆಯಲಿ ಮಹಾದೇವಿಯಕ್ಕಗೆ
ಕರುಣಿಸಿದೆ ಕಳುಹಿದನು ಸನ್ಮಯ ಗುರು ಗುಹೇಶ್ವರನು

ಇಷ್ಟಲಿಂಗದ ಮಾರ್ಗದಲಿ ಸಂ
ತುಷ್ಟರಾಗಿ ಶಿವಾನುಭಾವದ
ಗೋಷ್ಠಿಯನು ಸಲೆ ಕೇಳಿ ಕೇಳಿ ಮನೋನುರಾಗದಲಿ
ದುಷ್ಟದುರ್ವಾಸನೆಯ ನೀಗಿ ವಿ
ಶಿಷ್ಟವೆನಿಪಾ ಪ್ರಾಣಲಿಂಗದ
ನಿಷ್ಠರಪ್ಪರು ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

ಗುರುವನಱಸುವೆನೆಂದು ತಿಪ್ರನೆ[೧]
ತಿರುಗಿದಳು ಗಿರಿಗಹ್ವರಂಗಳ
ಗುರುವನಱಸುವೆನೆಂದು [೨]ತೊಟ್ಟನೆ ತೊಳಲಿದಳು[೨] ಧರೆಯ
ಗುರುವನಱಸುವೆನೆಂದು ಕಾಯವ
ಕರಗುತಿರ್ದಳು ಕಾತರಿಸಿ ಸದ್
ಗುರುವನಱಸುವ ವೇಧೆ[೩]ಯಲಿ ಮೆಱೆದಳು ಮಹಾದೇವಿ ॥ ೨ ॥

ಹೊಂಪುಳಿಯ ಘನಸೌಖ್ಯ ಮಿಕ್ಕಳಿ
ಗಂಪುಗಳ[೪]ಲಿಲ್ಲೆನುತೆ ತನ್ನೊಳು
ಜೊಂಪಿಸುವ ಮನವೆಂಬ[೪] ತುಂಬಿಯು ಭಾವ ಮಿಗ ತುಂಬಿ
ಸಂಪಗೆಯ ನಾ[೫]ರ್ವಂತೆ ಬಂದಳ
ಲಂಪಿನಲಿ ಮಾದೇವಿ ಮುಕ್ತಿಯ
ನೂಂಪು ಶೋಭಿಸುವಲ್ಲಮಪ್ರಭುರಾಯನಿದ್ದೆಡೆಗೆ ॥ ೩ ॥

೧ ತೊಟ್ಟನೆ (ಎ, ಬಿ) ೨ ತಿಪ್ಪನೆ ತಿರುಗಿದಳು (ಎ), ತಿಟ್ಟನೆ ತಿರುಗಿದಳು (ಪಿ)
೩ ವೇಧೆ (ಎ) ೪–೪ ಪೂವಿಂದೆ ಪೂರಿಸಿ। ಹೊಂಪುಹೊರೆಸವನುತೆ (ಕ)
೫ ಪಾ (ಕ, ಜ)

ಸಾರೆಯಲಿ ಶಿವಗಿಸಂಗಗಿವೆಂದೇ
ಹಾರವಿಸಿಕೊಂಡಿದ್ದೆನಂತಪ
ಪೂರ ಶಿಪೂರವದೆಂಬು ನೀನೇ ಹೆಪರಿಸಿದೊಡೆನಗೆ
ಆರು ಕರುಣಿಸಿ ಕಾಣಿಸುವರೆನ
ಗಾರು ಗತಿಮತಿಯೆನುತೆ ಕರುಣಾ
ಕಾರಗಾ ಮಾದೇವಿ ಬಿನ್ನೈಸಿದಳು ಭಕ್ತಿಯಲಿ ॥ ೧೨ ॥

ಆರು ನನ್ನನು ತಿಳಿವವೆನುತಲಿ
ಸಾರೆಯಿಂದಿದಿರಿಟ್ಟು ನೋಡಲು
ಪೂರವಾಗಿಹನಲ್ಲದಿರ್ದೊಡೆ ಪೂರವೆಂಪೆನಲು
ನಾರಿಯಾಗಿಹೆನೀ ಪರಿಯುಸಿದ
ಸಾರಿಗುಪಮಿಸಬಹುದು ಭಕ್ತ್ರವಿ
ಚಾರವನು ಬಸವಣ್ಣನಲಿ ಮಾದೇವಿ ಕೇಳಿಂಪ ॥ ೧೩ ॥

ಎನ್ನಜೀವು ಬಸವಣ್ಣನೆನಗಾ
ಚೆನ್ನಬಸವನೆ ಗುರುವೆಲ್ಲೈ ದಿಟ
ವೆನ್ನ ಲಿಂಗವೆ ನೀನು ಜಂಗಮವೆನಗೆ ರಾಮಯ್ಯ
ಎನ್ನ ತನುವೇ ಮಡಿವಳನು ನಾ
ನಿನ್ನ ಸುಖಿಯಹುದೇನು ಸೂಜಿಗ
ನಿನ್ನ ದಾಸರ ದಾಸಿಯಾನೆಂದಳು ಮಹಾದೇವಿ ॥ ೧೪ ॥

ಲೋಕದೊಳು ಸತಿಜನಸ್ರನು ತಾ
ಸ್ವೀಕರಿಸಿ ತನುಮೋಹಲೋಭವ
ನೂಕಿ ನಿಸ್ಪೃಹೆಯಾಗಿ ನಿಲುವವರಾರು ಸೃಷ್ಟಿಯಲಿ
ಈಕೆಗಾರೆಣೆ ಶಿವ ಶಿವಾ ಎನು
ತಾಕೆಯನು ಬಸವಣ್ಣಮುಖ್ಯರ
ನೇಕಪರಿಯಲಿ ಹೊಗಳುತಿರ್ದರು ಶರಣು ಶರಣೆನುತೆ ॥ ೧೫ ॥

೧-೧ ಶಿವಲಿಂಗ (ಎ), ಶಿವಪಥ (ಗ) ೨-೨ ವೆಂದೇ ನೀವು ಹೆಪರಿಸಿ ಸುಡಿ ದೊಡೆನ್ನಮಗೆ॥ ಆರು ಕರುಣಿಸುವವರು ಗತಿಮತಿ। ಯಾರು ಎನ್ನಯ ಭವಪ ಬಳ್ಳಿಯ। ನಾರುಹರಿವವರವರೆ ಗುರುವೆಂದಳು ಮಹಾದೇವಿ (ಇ) ೩ ಬಳಿ। (ಕೆ ಆ ಬ, ಜ, ಮ) ೪. ಧರಣ (ಇ)

ಕರಣಗಳು ಸಲೆ ಶುದ್ಧವಾದುವು
ಶರಣರನು ನೆನೆನೆನೆದು ಸಂತತ
ಶರಣರಿಗೆ ಶರಣೆಂದು ಕಾಯವುನೀತಮದುವಾಯ್ತು
ಶರಣರಿಂದಾನಿಂದು ಶುಚಿ[1]ಯಾ
ಗಿರಲು ತನುಮನಗಳ ವಿಕಾರದ
ಭರಕೆ ನಾನಂಜುವೆನೆ ಎಂದಳು ಮತ್ತೆ ಮಾದೇವಿ ‖ ೧೬ ‖

ಇಂತು ನಿರಹಂಕಾರದಿಂದೋ
ರಂತೆ ಕಾಯಮನೋವಿಕಾರದ
ಸಂತತಿಯ ನೈತಿಟ್ಟು ಪರಿಪಾಕಪ್ರ[2]ಭಾವ[3]ದಲಿ
ಸಂತಗೊಂಡು ಸಮಸ್ತಭಾವ
ಭ್ರಾಂತಿಯಳಿದೊಮ್ಮುಖವನೈದಿ ನಿ
ರಂತರಪಲತಿ ಮೆರೆವೃತ್ತಿರ್ದಳು ಮತ್ತೆ ಮಾದೇವಿ ‖ ೧೭ ‖

ನೆರೆತೆರೆಗಳಿಡಿಪಡರಿ[4] ತನು ಜ
ರ್ಜರಿತವಾಗಿಯನೇಕದಿನದಲಿ
ಹಿರಿಯಳ[5]ರೆಂದೆನಿಸಿದರೆ ಹಿರಿಯರೆ[6] ಬೆಟ್ಟದಂಪದಲಿ
ಹಿರಿದು ದಿನವಿರೆ ಹಿರಿಯರಹರೇ
ನಿರುತ ನಿರಹಂಕಾರವಿಲ್ಲದೆ
ಹಿರಿಯತನ ಮಾದೇವಿಗಾಯಿತ್ತೆಂದು ಭವಗಣ ‖ ೧೮ ‖

[illegible]
[illegible] ತ
ನ್ನೊಳಗೆ ನಂ[illegible] ಮಧು ಮಾಯೆ ಎಂದೆನುತೆ
ತಿಳಿಯಬೇಕೆಂದ್ಲ[illegible]
ತೊಳಲಿ ಬಳಲಿಪಳನ್ನು [illegible]ಸಿ
ನಿಲಿಸಬೇಕೆಂದಲ್ಲಮಪ್ರಭುರಾಯನಿಂತೆಂದ ‖ ೧೯ ‖

೧ ನುಖಿ (ಕ, ಗ) ೨ ಕೈಕ (ಇ) ೩ ವಾಹ (ಜ) ೪ ಕಿರಿದ (ಇ), ಸಿ (ಗ)
೫ ೫ ರನಿಸಿಯೆಕೊಂಡು ಬೆಳೆದಿರೆ (ಗ) ೬ ಡಳಿ (ಖ, ಕ)

ಆಯತನನಳವಡಿಸಿ ದಿಟವಾ
ಸ್ವಾಯತವನವಗಯಿಸಬೇಕಂ
ಬಾಯತಕೆ ಸರ್ವಾಂಗವನು ಸಲೆ ಸವೆಪರಾರುಂಟು
ಬಾಯ ನುಡಿಗಳ ಚದುರರಲ್ಲದೆ
ಕಾಯದಲಿ ಕಲಿಯಾರು ಭಕ್ತಿಯ
ದಾ[1]ಯ ನಿನ್ನಲಿ ನಲಸಿತಾ[2] ಮಾದೇವಿ ಕೇಳೆಂದ ॥ ೨೦ ॥

ಹಾಲ ಹದದಲಿ ಹೆಪ್ಪನೆಱೆದರೆ
ಮೇಲೆ ತುಪ್ಪವನುಂಬರಾ ಪರಿ
ಹೇಳಬಲ್ಲೊಡೆ ನಿನ್ನ ನಿರ್ಮಳಭಾವಭೂಮಿಯಲಿ
ಲೀಲೆ ಮಿಗೆ ಶಿವತತ್ತ್ವಬೀಜವ
ಹೊಳೆದರ ಫಲಿಸುವುದೆನುತೆ ಕರು
ಣಾಳು ವರಗುರುರಾಯನಾ ಮಾದೇವಿಗಿಂತೆಂದ ॥ ೨೧ ॥

ಆನು ನೀನೆಂಬುಭಯವನುಸಂ
ಧಾ[3]ನವನು ಮಿಗೆ ಮೀ[4]ಱಿ ಸಮಸಂ
ಸ್ಥಾನದಲ ಸುಯಿಧಾಸಿಯಾಗಿ ನಿರಾಳದಲಿ ನಿಂದು
ಜ್ಞಾನಜ್ಯೋತಿಯು ಬೆಳಗಿ ಕಾಯದ
ನೂನಕದಳಿಯ ಗೆಲಿಪ ನಿನ್ನಲಿ
ನೀನೆ ಮುಕ್ತಿಯನಜು[5]ವುದಾ ಮಾದೇವಿ ಕೇಳೆಂದ ॥ ೨೨ ॥

ಎನುತಲಾ ಮಾದೇವಿಯಕ್ಕಗೆ
ತನುಮನೋವಾಯುಗಳ ಸಂಚವ
ನನಲನಲಿ ಸಲೆ ಸುಡುವ ಸುಮತಿ[6]ಯ ಜೀವಪರಮರನು
ಅನುಗೊಳಿಸಿ ನಿರ್ವಯಲ ಮಾ[7]ಡುವ
ನೆನಹಿನುಪದೇಶವನು ಮಾಡಿದ
ನನುಪಮೋಪಮ ಸಗುಣನಿರ್ಗುಣ ಗುರು ಗುಹೇಶ್ವರನು ॥ ೨೩ ॥

೧ ಕಾ (ಉ) ೨ ತೊ (ಋ) ೩ ಥಾ (ಉ) ೪ ತಿಳಿ (ಕ) ೫ ನಜಿ (ಜ)
೬. ಸಮತೆ (ಇ, ಉ) ೭ ಕ (ಇ)

ಪರುಷ ಮುಟ್ಟಲು ಮುಂದೆ ಕಬ್ಬಿನ
ವರುಷವಲಿ ಹೊನ್ನಹುದ ನಿಮಿಷಕೆ
ಗುರುನಿರೂಪಜ್ಞಾನ[1]ಜ್ಯೋತಿಪ್ರಭೆ ಪ್ರಕಾಶಿ[2]ಸಲು
ಹರಿದುದಾಗಳೆ ಸಂದ[3] ಸಂಶಯ
ನೆರವಿಗತ್ತಲೆ ನಿತ್ಯ[4]ನಿರ್ಮಳ
ಗಿರಿಯ ಗಹನಕೆ ಗಮಿಸಿದಳು ಮಾದೇವಿ ಮನದೊಳಗೆ[5] ‖ ೨೪ ‖

ಎಲ್ಲರಲಿ ಶರಣಾರ್ಥಿಯೆಂದೆನು
ತೆಲ್ಲರಲಿ ಹರಕೆಯನು ಕೈಕೊಳು
ತೆಲ್ಲ ಶರಣರ ಚರಣವನು ನೆನಹಿನಲಿ ನೆಲೆಗೊಂಡು
ಬುಲ್ಲವಿಸಿ ಮೈಮಣಿ[6]ದು ಪಸರಿಸಿ
ಪಲ್ಲವಿಸಿ ಮಾದೇವಿ ಬಳಿಕೆ
ಮ್ಮಲ್ಲಮಪ್ರಭುರಾಯನನು ಬೀಳ್ಕೊಂಡಳಾರ್ತಿಯಲಿ ‖ ೨೫ ‖

ನಡೆದು ಬಳಿಕೇಕಾಂತವಾಸದೊ
ಳಿಡಿದ ಕಾಯದ ಕದಳಿಯನು ದೊ
ಕ್ಕಡರಿ[7] ನಿಜ ಸಿರಿಗಿರಿಯ ಶಿಖರದ ಸಿದ್ಧಪೀಠದಲಿ
ಬಿಡದೆ ನೆಲಸಿದಳಚಲಪದವಿಯ[8]ಲ್
ಪಡೆದಳಾ ಮಹದೇವಿ ಸುಖದಲಿ[9]
ಪೊಡವಿಯಚ್ಚರಿಯಲು ಗುರು ಗುಹೇಶ್ವರಲಿಂಗ ಲೀಲೆಗಿ[10]ಂಯಲಿ ‖ ೨೬ ‖

## ಅಂತು ಗತಿ ೧೭ಕ್ಕೆ ಪದ ೭೫೫ಕ್ಕೆ ಮಂಗಳಂ

೧ ವಿಸಪ್ಪಹೆಯಿಂದೆ (ಜ) ೨ ವಿಕಾಸಿ (ಅ, ಖ, ಗ, ಜ), ವಿರಾಜಿ (ಇ, ಜ)
೩ ಮನದ (ಗ) ೪ ನೀಗಿ (ಇ) ೫ ಮ (ಎ) ೬ ಮರೆ (ಇ, ಉ)
೭. ಗ (ಉ) ೮ ಪಲಿ (ಇ.) ೯. ವನು (ಇ) ೧೦. ನೊಲುವು (ಗ)

# ೧೮ ಸಾಧಕಾಂಗದ ಗತಿ

**ಸೂಚನೆ**

ಬಸವರಾಜಗೆ ಸಾಧಕಾಂಗದ
ಬೆಸುಗೆಯನುವಿನ ಭೇದವನು ಬೋ
ಧಿಸಿದನೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ

ಆರು[1] ಮೊದಲಲಿ[2] ಭಕ್ತಿ[1] ಮಾರ್ಗದ
ದಾರಿಯನು ಸಲೆ ತಿಳುಹಿ ಮಾಡಿ ಮ
ನೋರಥವ ಪಡೆದವರು ಕಾಯದ ಕೀಲನರಿದವರು
ಕಾರಣಂಗಳ ಮೂಲವನು ಕ
ಣ್ಣಾರೆ ಕಾಬ ಮಹಾಂತ[3]ರುಗಳದ
ಧಾರಿವುದು ಮುದದಿಂದಲೀ ಪ್ರಭುಲಿಂಗ ಲೀಲೆಯನು ॥ ೧ ॥

ನಿಲಿಸಿ ನಿರ್ವಯಲಿನ ಸಮಾಧಿಯ
ನೆಳವಡಿಸಿ ಮಹದೇವಿಯಕ್ಕನ
ಕಳುಹಿ ತದನಂತರದಲಗ್ಗದ ಬಸವರಾಜಂಗೆ
ತಿಳುಹುವೆನು ಶಿವತತ್ತ್ವಭಕ್ತಿಯ
ಬಳಕೆಯನುಭಾವದ ವಿವೇಕ
ಸ್ಥಲವನೆಂದೆನುತಲ್ಲಮಪ್ರಭುರಾಯನಿಂತೆಂದ ॥ ೨ ॥

ಒನೆದು ತಾ ಹಿಡಿದಿಷ್ಟಲಿಂಗದ
ಬೆಸನದಲಿ ಗುರುಲಿಂಗಜಂಗಮ
ವಶದಲಿಂತಿರುತಿರಲಿಕಂತಃಕರಣವೃತ್ತಿಗಳ
ಬೆಸುಗೆ ಬಿಡುವುದು ಪ್ರಾಣಲಿಂಗದ
ದೆಸೆಗೆ ಮನವೆಳಸುವುದು ಮಾಯೆಯ
ಮಸಕವೆಲ್ಲವು[4] ಮಾದು ಹೋಹುದು ಬಸವ ಕೇಳೆಂದ ॥ ೩ ॥

೧–೧ ಭಕ್ತಿಯ ಜ್ಞಾನ(ಜ) ೨ ಕೆಲವರು(ಗ) ೩ ಹಾತ್ಮ (ಅ, ಎ, ಗ, ಜ, ಮು)
೪ ಮದುತಾ(ಉ)

ಉಸುರುಗರಗಸದಲ್ಲಿ ತನುವಿನ
ಬೆಸುಗೆಯನು ಬಿಡುಮಾಡಿ ಬಿಸುಡದೆ
ಹಸುತೃಷಯ ಹರಿಹುಗಿಲಿನು[೧]ವಟಳೆಕಂಜಿ ಮುಖಗೊಡದೆ
ದಶವಿಧೇಂದ್ರಿಯ ದಾಳಿಯಲಿ ಶಂ
ಕಿಸದೆ ನಿಲುವೊಡೆ[೨] ಸಿದ್ಧರಾಮನ
ದೆಸೆಯ ನೆನೆಯಲು ಭಕ್ತರಹರ್ೈ ಬಸವ ಕೇಳೆಂದ || ೮ ||

ದೇವ ದೇವ ಮಹಾಪ್ರಸಾದವಿ
ದಾವ ಶಬ್ದವ ಚಿತ್ತವಿಸಿದಿರಿ
ನೀವು ನಿಮ್ಮಯ ಕಿಂಕರರೊಳಿನ್ನಾರ ಹೋಲುವೆನು
ದೇವ ನೀ ಮನ್ನಿಸಿದೊಡಥಮನೆ
ಪಾವನಾತ್ಮಕನಲ್ಲದೊಡೆ ಜಡ
ಜೀವರಿಂಪತಿಕಷ್ಟವೆಂದನು ಸಿದ್ಧರಾಮಯ್ಯ || ೯ ||

ಪರಮ ಪೂರ್ವಾಚಾರ್ಯ ಬಸವೇ
ಶ್ವರನು ಘನ ಗುರು ಚೆನ್ನಬಸವನು
ನಿರುಪಮಜ್ಞಾನೈಕ[೩]ನಿಧಿ ಮಡಿವಾಳ ಮಾಚಯ್ಯ
ವರ ಮಹಾಗಣ ತಿಂತಿಣಿ[೪]ಯೊಳನಿ
ಬರೊಳು ಗಣಿಸುವೊಡಾನದೇಸ[೪]ಜ
ಹುರುಳು ಹೇಳಾ ದೇವ ಎಂದನು ಸಿದ್ಧರಾಮಯ್ಯ || ೧೦ ||

ಪೂತು ಮಝರೇ ಸಿದ್ಧರಾಮನ
ಮಾತು ತಪ್ಪದು ಭಕ್ತರುಪಮಾ
ತೀತರಹುದೈ ಒಸವ ಮಡಿವಳ ಚೆನ್ನಬಸವಣ್ಣ
ಈತಗಳು ಸಾಕ್ಷಾತ ಲೋಕ
ಖ್ಯಾತಪುರುಷರು ಸತ್ಯವೆನುತ ಪು
ರಾತರನು ಮಿಗೆ ಹೊಗಳುತಾ ಪ್ರಭುರಾಯನಿಂತೆಂದ || ೧೧ ||

{೧ ಠವರಿಗಳು (ಉ) ೨ ನಮ್ಮಯ (ಉ) ೩ ಮಾನಂದೈಕ್ಯ (ಜ), ಕ್ಯ (ಗ)
೪-೪ ಯ ನಿ ರ್ಭರದೊಳಗೆ ಗಣಿಸುವೊಡದೇತ (ಇ)

ಆದಿಪುರುಷನು ಬಸವರಾಜನ
ನಾದಿಪುರುಷನು ಬಸವರಾಜನು
ನಾದಪುರುಷನು ಬಸವರಾಜನು ಬಸವರಾಜನನು
ವೇದಶಾಸ್ತ್ರಗಳಜನ[೧]ಲಱಿಯದೆ
ಹೋದುವೆನುತಲಿ ಬಸವರಾಜನ
ನೆಪ್ಪಿ ಹೊಗಳುತಲಲ್ಲಮಪ್ರಭುರಾಯನಿಂತೆಂದ ॥ ೧೨ ॥

ಆದೊಡಾಲಿಸಿ ಕೇಳು ಭಕ್ತಿಯ
ಹಾದಿಗೊಂದೇ ಕೀಲು ದಿಟ ಜೀ
ಕಾ[೨]ದುದೀ ತನು ತನು[೩]ಪಿಡಿದು ಕಾಬುದು ಸಮಸ್ತ[೩]ವನು
ಆದರಿಸಿಯೀ ತನುವ ಲಿಂಗೋ
ಸಾಧಿಯಲಿ ಜೋಗೈಸಿಕೊಳುತಲಿ
ಸಾಧಿಸುವುದು ಸಮಾಧಿಯನು ಬಸವಣ್ಣ ಕೇಳೆಂದ ॥ ೧೩ ॥

ಅನುಶ್ರವಣ ಮನನದ ನಿಧಿಧ್ಯಾ
ಸನದಲೊಚ್ಚತನಾಗಿ ತನ್ನಯ
ತನುಮನೋವಾಕ್ಕಾಯಕರ್ಮಗಳೊ[೪]ಂದು ಹುರಿಯಾಗಿ
ನೆನಹು ನೆಲೆಗೊಂಡಾ ಮಹಾತ್ಮಗೆ
ಘನವದಾವುದು ಗಮಿಸಿದರೆಯಾ
ತನೆ ಕಣಾ ಸ್ವಾತಂತ್ರಭಕ್ತನು ಬಸವ ಕೇಳೆಂದ ॥ ೧೪ ॥

ತನ್ನೊಳಗೆ ಗುರುಲಿಂಗಜಂಗಮ
ತನ್ನೊಳಗೆ ಪಾದೋದಕಾಮೃತ
ತನ್ನೊಳಗೆ ಪರಮಪ್ರಸಾದ ಸಮಸ್ತವೆಲ್ಲವನು
ತನ್ನೊಳಱಿಯದೆಯಿದಿರೊಳಱಸುವ
ಭಿನ್ನಭಾವಭ್ರಾಂತಭವಿಗಳು
ನನ್ನ ಸಾಧಿಸಲಱಿಯರೈ[೫] ಬಸವಣ್ಣ ಕೇಳೆಂದ ॥ ೧೫ ॥

೧ ರಿಯ (ಕ) ೨–೨ ದೊಡೀ ತನುವಿಡಿದು ಕಾಂಬುದು ಸರ್ವವೆಲ್ಲ (ಅ)
೩–೩ ಪಿಡಿದು ಕಾಂಬುದು ಸುಖಸಮಸ್ತ (ಜ) ೪ ವೆಲ್ಲವನೊಂ (ಇ)
೫ ಬಲ್ಲರೇ (ಇ)

ಐದು ನಿಮಿತ್ತದಲಿಂತರಂಗದ
ಪದರ[1]ದೊಳು ಗುರುಲಿಂಗಜಂಗಮ
ದೊರೆವನು[2] ಪಾದೋದಕಾಮೃತ[3] ಸುಪ್ರಸಾದವನು
ಹೃದಯದಲಿ ಕಾಂಕ್ಷೆಬರ ತ
ಪ್ಪಿದಿರದಲಿ ಪೂಜಿಪರೆಲೈ ಪ್ರತಿ
ನಿಧಿಯ ನಿಯಮಿಸಿ ಪೂರ್ವಪುರುಷರು ಬಸವ ಕೇಳೆಂದ ॥ ೧೬ ॥

ವ್ಯಾಧಿಗಳ ನೆರೆ[4]ಗೆಲಿದು ಶೀತೋ
ಷ್ಣಾದಿಗಳ ಪರಿಹರಿಸಿ ತಾಗು ನಿ[5]
ರೋಧವೆಲ್ಲವ ನೀಗಿ ನಿಂದಾಸ್ತುತಿಗೆ ಸಮನಾಗಿ
ಐದು ಮುಖದಲಿ ಹರಿವ ಮನವನು
ನೇದಿ ನಿಶ್ಚಲವೆನಿಸಿ ಸತ್ಯಸ
ಮಾಧಿಯು[5]ಲಿ ನಿಂದವನೆ ಭಕ್ತ[6]ನು ಬಸವ ಕೇಳೆಂದ ॥ ೧೭ ॥

ಮನವನೊಬ್ಬುಳಿ ಮಾಡಿದಲ್ಲದೆ
ತನುವಿನೊಳಗನು ಕಾಣಬಾರದು
ತನುವಿನೊಳಗನು ಕಾಣದಿರ್ದೊಡೆ ಭಕ್ತಿರತಿಯಿಲ್ಲ
ವಿನುತ[7]ಭಕ್ತಿಯ ರತಿಯ ಕಾಣದೆ
ಘನವನೆಯ್ದಲು ಬಾರದಂತಾ
ಘನವ ಬೆರಸದೆ ಮುಕ್ತಿಯಾಗದು ಬಸವ ಕೇಳೆಂದ ॥ ೧೮ ॥

ಮಾರುತನನೇರುವೊಡೆ ಮಾರ್ಗದ
ದಾರವನು ಹಿಡಿವಲ್ಲದಾಗದು
ಧೀರತನದಲಿ ಸಂಚಲಿಸುತಿಹ ಮನವ ನಿಲಿಸುವೊಡೆ
ಮಾರುತನ ಗತಿಗಡಿಸಿ ಕಾಯದ
ಕಾರಣವನರಿವಲ್ಲದಾಗದು
ವೀರಶೈವದ ಬಟ್ಟೆಯಿದು ಬಸವಣ್ಣ ಕೇಳೆಂದ ॥ ೧೯ ॥

೧ ಸದನ (ಉ) ೨ ವಧಿಕೆವಡ (ಇ) ೩ ಕವನಾ (ಒ) ೪ ಪಿ (ಗ)
೫–೫ ನೆ ಕಂಡವನು ಜಾಣ (ಜ) ೬ ಇನಿತು (ಇ, ಉ) ೭ ಯದುವೇ (ಇ)

ಸಲೆ ಷಡಾಧಾರಾಂಬುಜಂಗಳ
ನೆಲೆಯುಸಪಾಯುಪಿಪೇಕ್ಷೆ ಬೇಸದ
ಒಲಿವುದಿಂತು ಷಡುಸ್ಥಳಂಗಳನು ವಿನೋದದಲಿ
ಇಳೆ ಜಲಾನಲ ವಾಯು ಗಗನ
ಸ್ಥಳಕುಳಂಗಳನಾತ್ಮತತ್ತ್ವದೊ
ಳಳಿಹಿ ಸುಖಿಸುವವನೆ ಭಕ್ತ[1]ನು ಬಸವ ಕೇಳೆಂದ ॥ ೨೧ ॥

ಆಯು ಭೂತಗಳಾ[2]ಯು ಚಕ್ರಗ
ಳಾಯುಹವು ಪರಿವಿಡಿಯುಲವನೊಳು
ಮಾಯಾಜ ಹರಿ ರುದ್ರನೀಶ ಶಿವಾ[3]ತ್ಮತತ್ತ್ವಗಳು
[4]ತೋಯುವುವು ನೆಲೆವಿಡಿದು ಸಲೆ ಬಲು
ಪೇಯು[4] ಸಾಧಿಸಿಯಂತವೆಲ್ಲವ
ಸಾಪ[5] ದಾಂಟುವವನವನೆ ಭಕ್ತನು ಬಸವ[5] ಕೇಳೆಂದ ॥ ೨೨ ॥

ನೆಟ್ಟನಾ ಗುದಲಿಂಗನಾಭಿಯು
ಮುಟ್ಟಿ ಗುರುನೆಲೆ ನಾಭಿ ಹೃದ್ಗಳ
ಮುಟ್ಟೆ ಜಂಗಮದಿಕ್ಕೆಗಳ ಭ್ರೂ ಬ್ರಹ್ಮರಂಧ್ರಗಳ
ನಿಟ್ಟಿಸಲು ಶಿವಲಿಂಗದೋವರಿ
ಯೊಟ್ಟಿಲಾಗಿಹವಿವನು ಬೆರಸುವ
ಕಟ್ಟಳೆಯ ಕಂಡವನೆ ಭಕ್ತನು ಬಸವ ಕೇಳೆಂದ ॥ ೨೩ ॥

ಬಿಂದುವನ್ನುವ ಗುರುಮುಖಾಗ್ನಿಗೆ
ತಂದು ಪಚನಿಸಿ ಜಂಗಮದ ಮುಖ
ದಿಂದ ಲಿಂಗಕೆ ನೀಡಿ ತನ್ಮುಖದಿಂದಲೊಕ್ಕುಳಿದ
ಸಂದ ಸುಧೆಯನಿವಾ ಪ್ರಸಾದದ
ನೊಂದು ಮನಸಿನಲುಂಡು ಪರಮಾ
ನಂದವನು ಪಡೆದವನೆ ಭಕ್ತನು ಬಸವ ಕೇಳೆಂದ ॥ ೨೪ ॥

೧ ಜಾಣ (ಜ) ೨ ದಲಾ (ಕ, ಖ ಗ, ಚ, ಜ) ೩ ರವಿಶಶಿಯಾ (ಗ) ೪-೪ ವೀರದಳವಡುತಿರ್ದಪಾದರೆ। ಸಾರೆ ಶಾಶ್ವತಭಕ್ತಿ ನೆಲೆಗೊಂ। ಡೇರತ್ರಾಡ ಗಾವುದಾತನೊಳು ಬಸವಣ್ಣ (ಉ) ೫ ತೋರೆ (ಒ)

ಧರೆ ಜಲಾಗ್ನಿಯನೆಯ್ದಿದರೆ ಸ
ದ್ಗುರುಕುಮಾರಕನಗ್ನಿ ವಿಡಿದಾ
ಮರುತ ಗಗನವನೆಯ್ದಿದರೆ ಜಂಗಮದಲವಧಾನಿ
ವರಗಗನವಾತ್ಮಸ್ಥಲವನೆ
ಯ್ದಿರಲು ಶಿವಲಿಂಗೈಕ್ಯನಿಂತೀ
ಪರಿಯನಱಿದವನೆನ್ನ[೧] ಭಕ್ತನು ಬಸವ ಕೇಳೆಂದ || ೨೮ ||

ಧರಣಿ ಜಲದಲಿ ಕರ್ಮಿ ಪಾವಕ
ಮರುತ ಮಂಡಲದಲ್ಲಿ ಭಕ್ತನು
ಪಿರಿಯ ಗಗನಾತ್ಮಸ್ಥಳಾನ್ವಿತನಾಗೆ[೨] ಸುಜ್ಞಾನಿ
ಪರಿವಿಡಿಯಲವನಿಳಿಹಿ ನಿಂದರೆ
ಪರಕೆ ಪರತರ ವಸ್ತುವಾಗಿಯೆ
ನೆರೆವನೆನ್ನಲಿ ಬಳಿಕಲಾತನು ಬಸವ ಕೇಳೆಂದ || ೨೯ ||

ಶಕ್ತಿಯೆಡ ಗುದಲಿಂಗವಂತಾ
ಭಕ್ತಿಯೆಡೆಯಾ ನಾಭಿ ಹೃದಯವು
ಮುಕ್ತಿಯೆಡೆಯಾ ತಾಲು ಹುಬ್ಬುಗಳದು ನಿಮಿತ್ತದಲಿ
ಶಕ್ತಿಯಲಿ ಸಂಪನ್ನನಾಗಿಯೆ
ಭಕ್ತಿಯಲಿ ಭಾವಜ್ಞನಾದೊಡ
ಮುಕ್ತಿಯೆಂಬುದು ಮುಂದೆ ನಿಲುವುದು ಬಸವ ಕೇಳೆಂದ || ೩೦ ||

[೩]ತನ್ನ ನೊಲಿ[೩]ವೊಡೆ[೪] ಶಕ್ತಿಯಿದಲಾ
ತನ್ನನಱಿವೊಡೆ ಭಕ್ತಿಯಿದಲಾ
ತನ್ನನಳಿವೊಡೆ[೫] ಮುಕ್ತಿಯಿದಲಾ ಲಿಂಗವಂತಂಗೆ
[೬]ತನ್ನ ತಾನಿಂತಡಱಿ ತನ್ನೊಳು
ತನ್ನ ತಾನಾಗಿದ್ದನಾದೊಡ
ನನ್ನ ನಚ್ಚಿನ[೭] ಭಕ್ತನಾತನು ಬಸವ ಕೇಳೆಂದ || ೩೧ ||

೧ ಪರಿವಿಡಿಯನರಿವವನೆ (ಓ) ೨ ಸ್ಥಳವನೈದಿರಲು (ಎ ಇ) ೩-೩ ನನ್ನನೊಲಿವೊಡೆ (ಎ) ೪ ನರಿ (ಖ) ೫ ನರಿ (ಖ) ೬ ನಿಂದಲ್ಲಿ (ಉ), ನೆಂದರಿದು (ಜ), ನಿಂತರಿತು (ಅ) ೭ ಮಚ್ಚಿನ (ಎ)

ಶುದ್ಧವೆನಿಪಾ ಪೂರ್ವಪಶ್ಚಿಮ
ಸಿದ್ಧ ಮುದ್ರಾ ಬಂಧ ಮೊದಲಾ
ಗಿದ್ದ ನಾನಾ[1] ಪರಿಪರಿಯ ಯೋಗೋಪದೇಶಗಳ[1]
'ಉದ್ಧರಿಸಲಾ ಬಸವರಾಜನ
ಬುದ್ಧಿ ಪ್ರಜ್ವಲ[2]ವಾಗಿ ಪಸರಿಸು
ತಿದ್ದುದೇನೆಂದೆಂಬೆ[3]-[3]ನಾ ಪ್ರಭುಲಿಂಗನೊಲುಮೆಯನು ॥ ೩೨ ॥
ಮಾಡುತಿಹುದನವರತಲನುಭವ
ಕೂಡವನ್ನಕವನುಭವಂಗಳ[4]
ಗಾಢದಲಿ ಗಮನಿಸುವುದೂರ್ಧ್ವಪದ[5]ಪ್ರಚಾ[6]ರಣೆಗೆ
ನೀಡಿ ನಿಲುಕುವುದಂತರಂಗದ
ನಾಡನಾಳುವೊಡೀ[7]ಪ್ರಕಾರವ[8]
ಜೋಡಿಸುತ್ತಿರುತಿಹುದು ಭಕ್ತರು ಬಸವ ಕೇಳೆಂದ ॥ ೩೩ ॥
ಅನುಭವಣೆಯಳವಡುವ ಪರಿಯಂ
ತನುಮತವನೊಳಗೊಂಡು ನಿಶ್ಚಲ
ಧನುವನಂಗೀಕರಿಸಿ ನೀವಿರಲಾ ದಿನಂಗಳಲಿ
ಮನವೊಲಿದು ನಾ ಬಂದು ಮೇಲಣ
ನೆನಹಿಗಾಕ್ಷಣ ಅಱುವ ಮಾಡುವೆ
ನೆನುತಲಾ ಪ್ರಭುರಾಯನಾ ಬಸವಣ್ಣಗಿಂತೆಂದ ॥ ೩೪ ॥
ನೋಡಬೇಕಾರಾರು ಭಕ್ತಿಯು
ಮಾಡಿ ಮುಕ್ತಿಯ ಪಡೆವೆವೆಂದೆನು
ಗೂಡಿ ನಿಚ್ಚಟರಾಗಿ ಧೀರೋದಾರ ವೃತ್ತಿಯಲಿ
ಖೋಡಿವೋಗದೆ ನಿರ್ವಹಿಸಿ ಹೇ
ಡಾಡದವರನು ಕಾಪೆವಾವಿ
ನ್ನಾಡಿ ಬಹೆವೆಂದೆನುತಲಿರ್ದನು ಗುರು ಗುಹೇಶ್ವರನು ॥ ೩೫ ॥

**ಅಂತು ಗತಿ ೧೮ಕ್ಕಂ ಪದ ೭೯೦ಕ್ಕಂ ಮಂಗಳಂ**

೧-೧ ಪರಿಪರಿಯಮಂತ್ರ ಕ್ರಿಯೋಪದೇಶವನು (ಇ) ೨ ಪಂಜರ (ಎ), ಪಂಜಳ (ಕ, ಗ) ೩-೩ ನಲ್ಲಮಲಿಂಗನೊಲುಮೆಯಲಿ (ಗ), ೨ ಲೀಲೆಯಲಿ (ಇ, ಚ) ೪ ನ್ನೆಗ ಭಕ್ತಿ ಮಾರ್ಗವ (ಇ) ೫ ಪಥ (ಕ, ಗ) ೬ ಸಾ (ಜ) ೭ ಪುದೀ (ಗ, ಚ, ಜ) ೮ ದಿ (ಇ, ಚ

# ೧೯ ಗೋರಕ್ಷನ ಗತಿ

ಸೂಚನೆ

ಶರಣರೆಲ್ಲರ ನಿಲಿಸಿ ಹೋಗುತ
ಕರುಣದಲಿ ಗೋರಕ್ಷನಾಥಗೆ
ವಿರಚಿಸಿದನೆಮ್ಮಲ್ಲಪ್ರಭು ಲಿಂಗತತ್ತ್ವವನು

ನರ ತೊಗಲು ಎಲು ಮಿದುಳು ಕಬ್ಬಸು
ಕರಳು ಕೆಂಡ ಪುರೀಷ ಪುಂಜದ
ಶರೀರವೇ[೧] ಸ್ವಯವಾಗಿ ಸಿದ್ಧಿಯ[೨] ಪಡೆವೆವೆಂದೆಂಬ
ಮರುಳುತನವನು ನಿಲಿಸಿ ಸಾಕ್ಷಾತ್
ಪರಮ ಪದವಿಯಲಿರಿಸುವನುವನು[೩]
ಶರಣರೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ ॥ ೧ ॥

ಸಾಧಿಸುವುದಿನ್ನಿನ್ನು ನಿಮ್ಮೊಳು
ನಾದ ಬಿಂದು ಕಳಾ[೪]ಪ್ರ[೫]ಪಂಚದ[೪]
ಹಾದಿಯನು ಹೆರುಮಾಡುತಿಹುದೇಕಾಗ್ರಚಿತ್ತದಲಿ
ಆ ದಿನಕೆ ನಾ ಬಂದು ನಿಮ್ಮ ಸ
ಮಾಧಿಗಳ ಸಾಹಸದ ಪ್ರಾಪ್ತಿಯ
ನೈದ್ದಿ ನೋಡುವೆನೆನುತಲಾ ಪ್ರಭುರಾಯನಿಂತೆಂದ ॥ ೨ ॥

ಸ್ತುತ್ಯರಾಗಿಹುದಖಿಳ ಭಕ್ತರು
ನಿತ್ಯರಾಗಿಹುದಚಲ ಭಕ್ತರು
ಸತ್ಯರಾಗಿಹುದಮಲ ಭಕ್ತರು ಭಕ್ತಿಯಿಂದೆನುತ
ಮತ್ತೆ ಮುದದಲಿ ಸಿದ್ಧರಾಮನ
ನುತ್ತಮೋತ್ತಮ ಬಸವರಾಜನ
ಚಿತ್ತದಣಿಯಲು ಹೆರುಪದಲಿ ಹರಸಿದನು ಪ್ರಭುರಾಯ ॥ ೩ ॥

೧ ಸಯುವಾಗಿ ( ಬ, ಕ ), ಶಯುವಾಗಿ ( ಇ, ಉ, ಎ, ಬ, ಗ, ಡ ) ೨. ಪಡೆ ಎ,
೩. ನೀವಭೇದವ (ಜ ) ೪-೪ ಪ್ರಪಂಚಿನ (ಏ) ೫ ಬಂಧದ (ಅ ಓ ಜ)

ಮನವೊಲಿದು ಶಿವಶರಣರಲ್ಲರು
ತನತನಗೆ ಸಾಷ್ಟಾಂಗಸಹಿತ೧ವೆ
ತನುವನೀಡಾಡಿದರು ಗುರುವಿಗೆ ಬಳಿಕಲವರುಗಳ
ವಿನಯದಿಂದಿರಹೇಳಿ ಮರ್ತ್ಯದ
ಮನುಜರನು ಪಾವನವ ಮಾಡುವೆ
ನೆನುತ ಗಮಿಸಿದನಲ್ಲಮಪ್ರಭು ಲಿಂಗಲೀಲೆಯಲಿ || ೪ ||

ಇತ್ತಲೀ ಬಸವಣ್ಣ ಮೊದಲಾ
ದುತ್ತಮದ ಶಿವಭಕ್ತರೆಲ್ಲರು
ಚಿತ್ತದಲಿ ನಿಜಗುರುನಿರೂಪವ ಮಾಡತೊಡಗಿದರು
ಅತ್ತ ಸೊನ್ನಲಪುರಕೆ ಹೋಗಿ ವಿ
ಚಿತ್ರದಿಂದಲಿ ಸಿದ್ಧರಾಮನು
ಮತ್ತೆ ಮನದಲಿ ಮಾಡುತಿರ್ದನು ಶಿವಸಮಾಧಿಯನು || ೫ ||

ಧರಣಿಯೊಳಗಾರಾರದಾವಾ೨
ಚರಣೆಗಳನಾಚರಿಸುತಿಹರಾ
ಪರಿಯಲವರವರಿಗೆ ಯಥೋಚಿತ ಸುಪ್ರಸನ್ನತೆಯ
ಕರುಣಿಸುವೆನೆಂದೆನುತ ಸಚರಾ
ಚರರಿಗುಪಕಾರಾರ್ಥವಾಗಿಯೆ
ಗುರು ಗುಹೇಶ್ವರಲಿಂಗ ಸುಳಿದನು ತನ್ನ ಲೀಲೆಯಲಿ || ೬ ||

ಒನೆದು ಕುಲಗಿರಿಕುಲವನೋಲಿದೀ
ಕ್ಷಿಸಲು ವರುಷದ ಪರ್ವತಂಗಳ
ಹೆಸರ ಹಡೆದುವು ತರುಲತಾನಿಕರವ ನಿರೀಕ್ಷಿಸಲು
ಮಿಸುಪ ಸುರತರು ಕಲ್ಪಲತೆಯೆಂ
ಬೆಸಕವಾದುವು ನೋಡೆ ಸರಸಿ
ಪ್ರಸರವಮೃತಗಳಾದುವಾ ಪ್ರಭುಲಿಂಗಲೀಲೆಯಲಿ || ೭ ||

೧ ದಿಂದ (ಇ), ವೆಸುತ (ಉ) ೨. ವ ಪರಿಯಾ (ಇ)

ಪೊಡವಿಯನು ಪಾವನವ ಮಾಡುತ
ನಡೆದು ನಲವಿಂ ಬರುತ ಬರುತಲಿ
ಬಡಗ ಭೂಮಿಯ ಪುಣ್ಯಪುರುಷರ ಚಾರು ಚರಿತೆಯನು
ಬಿಡದೆ ನೋಡುವೆನವರು ಬೇಡುತ
ಕೊಡುವೆನೆಂದೆನುತೊಲಿದು ಕರುಣದ
ಕಡಲಿನಂತಿರೆ[೧] ಬಂಧನಾ ಪ್ರಭು ಲಿಂಗಲೀಲೆಯಲಿ ॥ ೮ ॥

ಇದಿರುವರಿತಂದಲ್ಲಮಪ್ರಭು
ಪದಪಯೋಜಸ್ಪರುಶನದ ನಂ
ಪದದ ಸತ್ತ್ವದಲಾದುವಗ್ಗದ ಪುಣ್ಯನದಿನಿಕರ
ಮುದದಲೆಡೆಗೆಯ್ದಿಡೆಗಳೆಲ್ಲವು
ಸದಮಲಕ್ಷೇತ್ರಂಗಳಾದುವು
ವಿದಿತವೆಮ್ಮಯ ಗುರು ಗುಹೇಶ್ವರ ಲಿಂಗಲೀಲೆಯಲಿ ॥ ೯ ॥

ನಿಧಿಯ ಚಿಂತಾಮಣಿಯ ದಿವ್ಯೌ
ಷಧಿಯ ಪರುಷದ ಕಣಿಯ ಸುಲಲಿತ
ಸುಧೆಯ ಬಿಲಗಳ ಸಿದ್ಧರಸಪಾದುಕೆಯನಂಜನವ
ನಿ[೨]ಧಿ ನಿ[೨]ಧಾನದ ವಸ್ತುಗಳ ತ
ಮ್ಮಿದಿರಲಱಿಸುವ ಸಾಧಕರ ತವ
ನಿಧಿಯೆನಿಪ ಶ್ರೀಗಿರಿಯ ಕಂಡನು ಬರುತ ಪ್ರಭುರಾಯ ॥ ೧೦ ॥

ನಡೆವ ಲತೆಗಳು ನಗುವ ಗಿಡಗಳು
ನುಡಿವ ಶಿಲೆಗಳು ತೇಜದಿಂದುರಿ
ಯಿಡುವ ತರುಗಳು ದಿವ್ಯರುಚಿಗಳನೀವ ಗುಲ್ಮಗಳು
ಕುಡಿಸೊಡಂತಃಕರಣಶು[೩]ದ್ಧಿಯ
ಕೊಡುವ ಮಡುಗಳು ಜಾತಿವೈರವ
ತೊಡದ ಖಗ ಮೃಗ ಮೆಱೆದುದಾ ಶ್ರೀಗಿರಿಯ ಶಿಖರದಲಿ ॥ ೧೧ ॥

೧. ನಂಪದಿ (ಇ) ೨-೨ ವಿ (ಕ, ಮ) ೩ ಸಿ (ಅ. ಕ ಜ)

ಏಱಿ ನೋಡಲು ಸತ್ಯಲೋಕಕೆ
ಹಾಱುಸುವ ಗಿರಿಶಿಖರಗಳು ಮಿಗೆ
ಮೀಱಿ ಹೊಕ್ಕೊಡೆ ಸಪ್ತ ಪಾತಾಳದ ಸಘಾಟಿಕೆಯ
ತೋಱುಸುವ ಬಿಂಕದ ಬಿಲಂಗಳು
ಸಾಱಿ ಸಾಧಕರೇನ ಬಗೆದುದ
ಹೇಱಿ ಕೊಡುವ ಸುವಸ್ತುವಿರ್ದುವು ಪರ್ವತಾಗ್ರದಲಿ || ೧೨ ||

ಆ ಮಹಾ ಶ್ರೀಗಿರಿಯ ಶಿಖರದೆ
ಕಾಮಿತಾರ್ಥವ ಹಡವೆನೆಂದು
ದ್ದಾಮತೆಯ ಗೋರಕ್ಷನೆಂಬ ಸಮಸ್ತಸಾಧಕನು
ಪ್ರೇಮದಿಂದಿರುತಿರಲಿಕಾ ದಿನ
ವೀ ಮನೋಹರಮೂರ್ತಿಮಯ ನಿ
ಸ್ಸೀಮನಲ್ಲಮನಲ್ಲಿಗೆಯ್ತಂದನು ವಿನೋದದಲಿ || ೧೩ ||

ರೋಗಿಯಲ್ಲಿಗೆಯಮೃತವೇ ಮೈ
ಯ್ಯಾಗಿ ನಡೆತಂದಂತೆ ಜೀವವಿ
ಯೋಗತನುವಿಗೆ ಮುಟ್ಟೆ ಮರುಜೇವಣಿಗೆ ಬಂದಂತೆ
ಮೂಗಗಮಲ ವಚೋವಿಳಾಸತೆ
ಯಾಗುದೋಱಿಸಿದಂತೆ ಕೃಪೆಯಿಂ
ದಾಗಳಾ ಗೋರಕ್ಷನಲ್ಲಿಗೆ ಬಂದ ಪ್ರಭುರಾಯ || ೧೪ ||

ಬರಲಿಕಾ ಪ್ರಭುರಾಯನಡಿಗಳಿ
ಗೆಱಗಲೊಲ್ಲದೆ ಹಮ್ಮಿನಿಂದಲಿ
ಬೆಱೆತು ಬಿಂಕದ ಬಿಮ್ಮಿನಲಿ ಕೈ ಮುಗಿದು ಶರಣೆಂದು
ಗುರುತರಾಸನದಲ್ಲಿ ಮಿಗೆ ಕು
ಳ್ಳಿರಿಸಿ ಕೂರ್ಮೆಯಲೊಯ್ಯನೊಯ್ಯನೆ
ಪರಿವಿಡಿ[^1]ಯಲಲ್ಲಮಗೆ ಬಿನ್ನೈಸಿದನು ಗೋರಕ್ಷ || ೧೫ ||

[^1]: ೧ ಪರಿ (ಅ, ಉ ಔ, ಜ)

ಆವ ಕಡೆಯಿಂ ಬಿಜಯ ಮಾಡಿದಿ
ರಾವ ಕಾರಣ ಬಂದ ಬರವೇನು
ಗಾವುದೈ ಬನನೇನು ಹದನ ನಿರೂಪಿಸಾ ಪ್ರಭುವೆ
ನೀವು ಬಹುದೆಮಗತುಳ ಭಾಗ್ಯಫ
ಲಾವಳಿಗೆ ಕಾರಣವಲಾ ಮಹ
ದೇವ ಎನುತಲಿಯು[1]ಚಿತ ವಚನವ ನುಡಿದ ಗೋರಕ್ಷ ‖ ೧೬ ‖

ನುಡಿಯನಾಲಿಸಿ ಕೇಳು ಭಕ್ತಿಯ
ಕಡೆಯಲಾವೆಯ್ತಂದೆವೆಮಗೀ
ಕಡೆಯ ಮನುಜರ ಮನಕೆ ಕಡೆಯನು ಮಾಡಬೇಕಾಗಿ
ಒಡಲಿನಾನೆಗೆ ಕುದಿದು ಕೋಟಲೆ
ಬಡುವವರ ಕಳವಳನ ಕಳಚಲು
ನಡೆದು ಬಂದವರಾವೆಲೈ ಗೋರಕ್ಷ ಕೇಳೆಂದ ‖ ೧೭ ‖

ಹೊಸತಲಾ ಲೌಕಿಕದುಚಿತವ
ಪಸರಿಸಲು ಪರಮಾರ್ಥವನು ಸೂ
ಚಿಸುತಲಿಹನೆಯದಲ್ಲದೆನ್ನನು ಮುನ್ನ ಪರಕಿಸದೆ
ಹೆಸರುಗೊಳುತಲಿದಾನೆಯೀತನ
ಗಸಣೆ ತಾನೇಯಾದಿನಾಥನ
ಬೆಸುಗೆಯಾಗಲು ಬೇಕೆನುತ ಗೋರಕ್ಷನಿಂತೆಂದ ‖ ೧೮ ‖

ಎಲೆ ಮಹಾಪುರುಷಾ ನಿಧಾನಿಸಿ
ತಿಳಿಯೆ ನಿನ್ನಂತಸ್ಥವೆಂಬುದು
ನಿಲುಕದೆಮ್ಮಯ ಮತಿಗೆ ನಿನ್ನಯ ರೀತಿ ಹೊಸತಾಗಿ
ಹೊಲಬು ಹಂಗದೆಮ್ಮಱುವುಗಿಱುವಿನ
ನಲುಗೆ ನಲ್ಲದು ನಾಕು ನಿನ್ನಯ
ನೆಲೆಯ ನೀನೇ ಬಲ್ಲೆಯೆಂದನು ಬಳಿಕ ಗೋರಕ್ಷ ‖ ೧೯ ‖

೧ ಎಂದೆನುತು [ಗ]

ತನ್ನ ನಱಿಯದ ಮಂದಮತಿಗಳಿ
ಗಿನ್ನು ಪೆಱರಂತನ್ನವೆಂಬುದು
ಕಣ್ಣು ಕಾಣದ ಕುರುಡ ಕನ್ನಡಿವಿಡಿದ ತೆಱನಂತೆ
ನನ್ನ ನಿಜದ ನಿಧಾನವನು ಬಳಿ
ಕಿನ್ನು ಕಾಬವರಾರು ಮಾತಿನ
ಬಿನ್ನಣಿಗರಿಗೆ ಸಾಧ್ಯವೇ ಗೋರಕ್ಷ ಕೇಳೆಂದ || ೨೦ ||

ಕಾಯವೆಂಬುದು ತಾನು ತಾನೇ
ಕಾ[೧]ಯವಾಗಿಹನಿಂತು ತನ್ನೊಂ
ದಾಯತದ ತಿಳಿವೆಂಬುದಿದು ಕಾಪಾಲಮಾರ್ಗದಲಿ
ನ್ಯಾಯಧರ್ಮವು ನನ್ನ ನಱಿ[೨]ವ ವಿ
ಡಾಯವೆನಗೇನಱಿದು ಪ್ರಭುವೆ
ಬಾಯನುಡಿಗಳ ಬಲ್ಲಿದರು ನಾವಲ್ಲ ಕೇಳೆಂದ || ೨೧ ||

ಎಲು ತೊಗಲು ಮಲ ಮೂತ್ರ ನೆತ್ತರ
ಕೊಳಚಿಯಾಗಿಹ ಹೇಸಿಕೆಯ ತನಿ
ಗೊಳೆಯೊಡಲು ತಾನೆಂಬ ಮೂರ್ಖನು ತನ್ನ ಅಱಿದವನೆ
ನಲುವುದೇ ಕಾಪಾಲಮಾರ್ಗಕೆ
ಹಳಿವ ತಹರೇ ಸಂಪ್ರದಾಯದ
ನೆಲೆಯನಱಿವುದು ನೂಱಿ[೩]ಯೆ ಗೋರಕ್ಷ ಕೇಳೆಂದ || ೨೨ ||

ಮಾಡಲಱಿಯದವಂಗೆ ಕೊಳಚಿಯ
ಮಾಡುವೀ[೩]ತನು ತಪ್ಪದೈ ದಿಟ
ಮಾಡಬಲ್ಲೊಡೆಯೀ ಶರೀರವೆ ರತ್ನವಾಗಿಹುದು
ಖೋಡಿಗಳೆವುದು ಮಾಯೆಗೀಯೆಯ
ನೇ[೪]ಡಿಸುವುದಾ ಮಿತ್ತುಗಿತ್ತುವ
ರೂಢಿಯಲಿ ತನು ಸಿದ್ಧರಾಪ್ಪೈ ಪ್ರಭುವೆ ಕೇಳೆಂದ || ೨೩ ||

೧ ಮಾ (ಅ, ಇ, ಉ, ಗ) ೨ ಬೀಡಲ್ಯೆ (ಇ) ೩ ನೋ(ಇ)

ಎಲೆ ಮರುಳೆ ಮೃದುವಾದ ಮಾಯೆಯು
ಬಲೆಯ ಬಲ್ಲಿತ ಮಾಡಿ ನಾವನು
ಗೆಲಿದೆನೆಂದು ನಿರರ್ಥದಲಿ ಹಾರೈಸದಿರು ಬಱಿದೆ
ತಿಳಿವೊಡೀ ತನು ತಾನೆ ಕಾಲನ
ನಿಳೆಯ ನೀನಿದ ನಂಬಿ[೧] ನುಡಿದರೆ
ಪ್ರಳಯ ನಿನ್ನನು ಬಿಡುವುದೇ ಗೋರಕ್ಷ ಕೇಳೆಂದ	॥ ೨೪ ॥

ಆದೊಡಿನ್ನೇಳೇಳು ಹಿಡಿ ಹಿಡಿ
ಕೈದುವಿದೆ ಕೋ ತನ್ನ ತನುವನು
ಹೊಯ್ದು ನೋಡಾ ನೀನು ನಿನ್ನಾವನಿತು ಸತ್ವದಲಿ
ಕೂದಲೊಳಗೊಂದಿನಿತು ಹಱಿಮುಱಿ
ಯಾದರಕಟಾ ನಾನು ಸಿದ್ಧನೆ
ವಾದವೇತಕೆ ದೃಷ್ಟವಿದಲಾ ಪ್ರಭುವೆ ನೋಡೆಂದ	॥ ೨೫ ॥

ಕೊಂದು ನೋಡುವುದಿದು ಪರೀಕ್ಷಿಸು
ವಂದವೇ ನಾವಱಿಯೆ ಪಾಸುರ
ಬಂಧಕರ್ಮವನಿದು ಗುಹೇಶ್ವರಲಿಂಗಮತವಲ್ಲ
ಇಂದು ನಿನ್ನ ಶರೀರವಳಿದೊಡೆ
ಮುಂದೆ ಸಿದ್ಧಿಯ ಹಡೆವರಾರೈ
ಮಂದಮತಿಗಾನಂಜುವೆನು ಗೋರಕ್ಷ ಕೇಳೆಂದ	॥ ೨೬ ॥

ನಾವು ಬಂದೊಡೆ ನಾವು ಸಿದ್ಧಿಸಿ
ತಾವುದೈ ತನುವಳಿವುದೇ ಶ
ಸ್ತ್ರಾವಳಿಗೆ ದಿಟವಣಿಯಬಾರದ ಮಡಕೆಯಡಬಹುದೆ
ಈ ವಿಕಲ್ಪವ ಬಿಟ್ಟು ನಿರ್ಭಯ
ಭಾವಭರದಲಿ ಹೊಡೆದು[೨] ನೋಡಿ
ನ್ನಾವ ಸಂಶಯವೇತಕೆಲೆ ಪ್ರಭುರಾಯ ಹೇಳೆಂದ	॥ ೨೭ ॥

೧ ನಚ್ಚಿ (ಚ) ೨ ಯ್ದು (ಬ, ಖ)

ಒಳ್ಳಿವೆಂದೆನಲೇಕೆ ಹುಟ್ಟಿಸ
ಬಲ್ಲವನು ಹೊಂದಿಸಿದೊಡಾತಗೆ
ಹೊಲ್ಲವಾವುದು ನಾವು ನಲಿಸುವೆವೀತನರ್ತಿಯನು
ನಿಲ್ಲದೆಱಗಲು ನತ್ತನಾದೊಡೆ
ಬಲ್ಲಿತಹೆ ಗೋರಕ್ಷನನು ನಾ
ವಿಲ್ಲಿ ಸೃಜಿಸುವೆವೆನುತಲಾ ಪ್ರಭುರಾಯನನುವಾದ ‖ ೨೮ ‖

ಹಿಡಿದು ಹಿಂಗದೆ ಬಲಿದು ಝಳಪಿಸಿ
ಜಡಿದು ಹೊಱಕೈಯಿಂದೆ ಖಣಿಖಟಿ
ಲಿಡಲಿಕಾ ಪ್ರಭುವಬ್ಬರಿಸಿ ಬಿಱು ಹೋಯಿಲನೆಱಗಿದರೆ
ನಡುಗಿದುದು ನೆಲ ಶಿಲೆಗಳನು ಮೈ
ಗೊಡಹಿದುದು ಗಿರಿಯೊಂದು ಕೂದಲು
ಕಡಿಯದಾ ಗೋರಕ್ಷನಲಿ ಏನೆಂಬೆನಚ್ಚರಿಯ ‖ ೨೯ ‖

ಮೋಹದಲಿ ಮಾಯಾ ಪ್ರಪಂಚಿನ
ದೇಹಸಿದ್ಧಿಯ ಪಡೆದೆನೆಂಬೀ
ಗಾಹಿನಿಂದಲಿ ವಜ್ರಪಿಂಡಶರೀರ ಫಲಿಸಿದೊಡೆ
ಊಹಿಸುವೊಡಾ ಪ್ರಳಯವನು ನಂ
ದೇಹವಿಲ್ಲದೆ ಗೆಲುವೆಯೋ ನುಡು
ದೇಹಸಿದ್ಧಿಯನೆನುತಲಾ ಪ್ರಭು ಖಂಡೆಯವ ಬಿಸುಟ ‖ ೩೦ ‖

ಸಿದ್ಧಿಯುಳ್ಳವನಂಗದಲಿ ಖಣಿ
ಲೆದ್ದು ಧ್ವನಿ ಹುಟ್ಟುವುದೆ ಹೊಯಿದೊಡೆ
ಸಿದ್ಧಿಯೆಂಬುದು ತಿಳಿವೊಡೀ ತೆಱನಲ್ಲ ನಂಬದಿರು
ಹೊದ್ದಿತಲ್ಲಾ ಪ್ರಳಯವೀ ಪರಿ
ಬದ್ಧದೇಹಿಗೆಯಕ್ಕಟಕ್ಕಾಟ
ಸಿದ್ಧತನ ಸಾಮಾನ್ಯವೇ ಗೋರಕ್ಷ ಕೇಳೆಂದ ‖ ೩೧ ‖



ಗೋರಕ್ಷನು ಪ್ರಭುದೇವರನ್ನು ಕತ್ತಿಯಿಂದ ಇರಿದದ್ದು

(ಪದ್ಯ ೩೪–೩೫)

ಬಱಿಸಿಡಿಲು ಶೀತೋಷ್ಣ ಖಡುಗದ
ಬಿಱುಬುಹೊಯಿಲಿಗೆ ಕೆಡದ ವಜ್ರದ
ಬಿಱಿಸಿನಂತೆನಿಸಿದ ಶರೀರವು ಸಿದ್ಧಿಯಪ್ಪೊಡೆ
ಪೆಱತದಾವುದು ಸಿದ್ಧನಾದೊಡೆ
ಕುಱುಹದಾವುದು ನೀಸು ಬಲ್ಲೊಡೆ
ಬಱಿಯ ಮಾತನು ಬಿಟ್ಟು ದಿಟವನು ಪ್ರಭುವೆ ತೋಱೆಂದ || ೩೨ ||

ಹಿಡಿದುಕೋ ಖಂಡೆಯವನಾದೊಡೆ
ಹೊಡೆದು ನೋಡೆಮ್ಮವನು ಮುನ್ನವು[೧]
ಮುಡುಹಿಗೆನಿತುಳ್ಳನಿತು ನಿನ್ನಯ ಸರ್ವ ಸತ್ವದಲಿ
ಖಡುಗ ಮುಖದಲಿ ಕಾಬುದಲ್ಲದೆ
ನುಡಿಯ ನುಣ್ಣಿಸಲೇನು ಕಾರಣ
ತಡವಿದೇತಕೆ ತಥ್ಯವನು ಗೋರಕ್ಷ ನೋಡೆಂದ || ೩೩ ||

ನೋಡಬೇಕಿನ್ನಾದೊಡೀತನ
ಗಾಡಿಯನು ನಲೆ ಸಿದ್ಧತನದಾ
ರೂಢವನು ಸಾಧಕರಿಗಿದೇ ಮಹನವಮಿಯೆಂದೆನುತ
ನೀಡಿ ನಿಜ[೨] ಸವ್ಯಾಪಸವ್ಯದ[೨]
ಮೋಡಿಯಲಿ ಬಿಡದೆಱಗುತಿರ[೩]ಲೀ
ಸಾಡಿತವನಸಿಯಮನು ಪ್ರಭುವಿನ[೩] ಬ[೪]ಯಲ ದೇಹದಲಿ || ೩೪ ||

ಸೊಪ್ಪುಳಾಗದು ಕೈದುವಾನದು
ವೊಪ್ಪವಳಿಯದು ಜಂತ್ರಜೋಕೆಗೆ
ತಪ್ಪಿದೋಱದು ಹೊಡೆಯೆ ಹಾಱುವ[೫] ಹದ್ದಿ[೬] ನಂದದಲಿ
ನಿಪ್ಪನರದಸಿ[೭] ಬಯಲ ದೇಹಿಯ
ನಪ್ಪಲಱಿಯದಿದೇನು ಚೋದ್ಯವೊ
ತಪ್ಪದೀತನೆ ಗುರುವೆನೆನುತ ಗೋರಕ್ಷನಿಂತೆಂದ || ೩೫ ||

೧ ಮುಂಗ್ಯ [ಅ, ಇ, ಗ] ೨–೨ ಸರ್ವಾಂಗಸತ್ವದ [ಜ] ೩–೩ ಉಸಘಾಂಡಿ ಮುಸಗಿ ದುದಲ್ಲಪ್ಪಪ್ರಭು [ಜ] ೪ ಳ್ಳನುನ ವಿರ್ವ [ಗ] ೫ ರದು [ಚ] ೬ ಹೊಟ್ಟೆ [ಗ, ಜ] ೭ ಲಿ [ಇ, ಉ, ಒ, ಜ]

ಅಣಕವಲ್ಲಿದು ತನ್ನ ಹೊಯಿದರೆ
ಖಣಿಲೆನುತ ಖಂಡೆಯಕೆ ಮಾಱಾಂ
ತಣೆದುದೆನ್ನಸು ನಿನ್ನ ಹೊಯಿದೊಡೆ ಬಯಲ ಹೊಯಿದಂತೆ
ನುಣುಚಿ ನುಣ್ಣನೆ ಕಡೆಗೆ ಖಂಡೆಯ
ಜುಣುಗಿ ಹೋಯಿತಿದಾವ ಮಹಿಮೆಯ
ಗುಣವೊ ನಮಗಿದನಱ[೧]ಯಬಾರದು ಪ್ರಭುವೆ ಹೇಳೆಂದ || ೩೬ ||

ಕಾಯ ಬಲಿದರೆ ಮಾಯೆ ಬಲಿವುದು
ಮಾಯೆ ಬಲಿದರೆ ಛಾಯ ಬಲಿವುದು
ಕಾಯ ಮಾಯಾ ಛಾಯೆ ಬಲಿದರೆ ಸಿದ್ಧತನವ[೧]ಲ್ಲ
ಕಾಯ ಮಾಯಾ ಛಾಯದಾಗಿ[೨]ನ
ದಾಯವನು ಕಳೆದುಳಿದನಾದೊಡ
ರಾಯನಾತನು ಸಿದ್ಧರಲಿ ಗೋರಕ್ಷ ಕೇಳೆಂದ || ೩೭ ||

ಆಧಿನಾಥನೆ ತಾನಿದೊಂದು ವಿ
ನೋದ ವೇಷವ ಧರಿಸಿ ತನ್ನಯ
ಸಾಧಕರ ಸಂಕಲ್ಪಸಿದ್ಧಿಯನೀಯಬೇಕೆಂದು
ಮೇದಿನಿಗೆ ಮೆಯ್ದೋಣಿಸಿದ[೩]ನಿ
ನ್ನಾದುದಾನಱಿಸುವ[೩]ಮನೋರಥ
ವೆಯ್ದೆ ಫಲಸಿದುದೆನುತಲಾ ಗೋರಕ್ಷನಿಂತೆಂದ || ೩೮ ||

ಅಱಿಯೆ ನಾನಿನ್ನೆಬರ ನಿನ್ನಯ
ತೆಱನನೆನ್ನಯ ಮತ್ತತನದಲಿ
ಬೆಱ[೪]ತುಕೊಂಡಾನಿರ್ದೆನೆನ್ನದು ಸರ್ವ ತಪ್ಪೆನುತ
ನೆಱೆ[೪] ಶರೀರವ ನೀಡಿ ಕೈಮುಗಿ
ದೆಱಗಿದನು ಭಯಭಕ್ತಿಭಾರದ
ಲೊಱಗುವಂ[೪]ತಾ ಪ್ರಭುವಿನಡಿಯೊಳು ಬಳಿಕ ಗೋರಕ್ಷ || ೩೯ ||

೧ ನವನ [ಬ, ಕ, ಢ, ಜ] ೨ ದನುವಿ [ಜ] ೩-೩ ನಿಂ ದಾದಿ ಶಿವ ಶಿವಕೃತ [ಇ]
೪ ತಂ [ಕ, ಜ]

ಬಿಸಿಯ ಹದನನು ತಿಳಿದು ಲೋಹವ
ಬೆಸುವವ್ರೊಲು ಪರಿವಾಕಭಾವದ
ಹೆಸನನೆಱ[೧]ದಿನ್ನಿತಗು[೧]ಪದೇಶಿ[೨]ಸುವೆನೆಂದೆನುತ[೨]
ಒಸೆದು ಹಣೆವಿಡಿದೆತ್ತಿ ಕರುಣವ
ಪಸರಿಸುತ ಗೋರಕ್ಷನನು ಮ
ನ್ನಿಸಿದನೆಮ್ಮಯ ಗುರು ಗುಹೇಶ್ವರ ಲಿಂಗಲೀಲೆಯಲಿ || ೪೦ ||

ನೋಡಿದರೆ ಮದಮತ್ಸರಗಳೆ
ದ್ದೋಡಿದುವು ಕರುಣದಲಿ ಗುರು ಮಾ
ತಾಡಿದೊಡೆ ಮಗ್ಗಿದುದು ಮನಸಿನ ಮಱವೆ ನಿಮಿಷದಲಿ
ನೀಡಿ ಕೈಮುಟ್ಟಿದೊಡೆ ಕಾಯದ
ಖೋಡಿ ಹೋಯಿತು ವಿಮಲ ತನು ಮನ
ಮೂಡಿತಾ ಗೋರಕ್ಷನಲಿ[೩] ಪ್ರಭುಲಿಂಗಲೀಲೆ[೪]ಯಲಿ || ೪೧ ||

ಬಳಿಕಲಾ ಗೋರಕ್ಷನತಿ ಕಿಂ
ಕಲವನಂಗೀಕಱಸಿ ಮನದೊಳು
ನಲಿದು ನೋಡುತ ರೋಮವುಳಕದ ಗುಡಿಯ ನೆಗಹುತಲಿ
ಎಲೆ ಮಹಾಘನ ಮಹಿಮ ಕರುಣಾ
ಜಲಧಿಯೆ ನಾನಾವ ಗತಿ[೫]ಯಲಿ
ನಿಲುವೆನೆನುತಾ ಪ್ರಭುವಿಗೆಂದನು ಭಕ್ತಿಯುಕ್ತಿಯ[೬]ಲಿ || ೪೨ ||

ಆದೊಡಾಲಿಸಿ ಕೇಳು ಕರಿಣತೆ
ಯಾದ ತನುವಿದು ಕಾಯಸಿದ್ಧಿಯ
ಭೇದವಲ್ಲದೆ ನಿತ್ಯಮುಕ್ತಿಯ ಸಿದ್ಧಿಯೆಂತ[೭]ಲ್ಲ
ಈ ದುರಾಶೆಯ ಹೋದ[೮] ಹೊಲಬಿನ
ಹಾದಿಯನು ಹುಗುದಾ[೯]ಗುಹೇಶ್ವರ
ವಾದಕೆಱಗಲು ಸಿದ್ಧನಹೆನ್ನೈ ಕಂದ ಕೇಳೆಂದ || ೪೩ ||

೧-೧ ದಿಂಗಿತದಲು [೩] ೨-೨ ಶನೆನುಸುರಲೆಂದು [ಗ] ೩ ಗೀ [ಅ, ಒ,] ೪ ನೊಲುಮೆ [ಇ] ೫ ಪರಿ [ಅ, ಕ] ೬ ಭಾವದ [ಜ] ೭ ನರಿವ ತೆರನ [ಇ] ೮ ಹೊದ್ದ [ಇ] ೯ ಬಿಡುವುದು [ಗ]

ನಂಬುವೊಡೆ ಹೇಳಾ ಗುಹೇಶ್ವರ
ನೆಂಬನಾವನು ವಾಸಿನಲು ತನ
ಗಿಂಬದಾವುದು ಭಜಿಸಲೆಂತಾತನನು ಹೇಳೆನಲು
ಹೆಂಬಲಿಸಲೇಕಾ ಗುಹೇಶ್ವರ
ನೆಂಬವನೆ ನಾನಿದಕೆ ಸಂಶಯ
೦ಬುದಿಲ್ಲೈ ಸತ್ಯ[1]ವಿದು ಗೋರಕ್ಷ ಕೇಳೆಂದ ‖ ೪೪ ‖

ಗುಹೆಯೆಲ್ಲೈ ಕೇಳಾತ್ಮಸಂತಾ[2]
ಗುಹೆಗೆ ಪತಿಯಾನೆನ್ನ ನಾಮದ
ಮಹಿಮೆ[3] ತಾನು ಗುಹೇಶ್ವರಾಂಕಿತವಾ[3]ದ ಕತದಿಂದೆ
ಮಹಿಯ ಲೌಕಿಕರಲ್ಲಿ ಮಱಹಿಸಿ
ವಿಹಿತವೆಂಬಂತಿರೆ ಗುಹೇಶ್ವರ
ಸಹಜನಾಮವೆ ನಟಿಸಿದೆನು ನಾ[4]ನೆನ್ನ[5] ಲೀಲೆಯಲಿ[4] ‖ ೪೫ ‖

ಅದು ನಿಮಿತ್ತದಲಖಿಳ ಜೀವರ
ಹೃದಯವಲ್ಲಭನೈ ಗುಹೇಶ್ವರ
ನದಱ ಭೇದವ ತಿಳಿದು ಸೋಹಂಭಾವ ಬು[6]ದ್ಧಿಯ[7]ಲಿ
ಸದಮಲಜ್ಞಾನೈಕನಾದರೆ
ನಿಧಿಯ ಕಾಬನು ನಿತ್ಯ ಮುಕ್ತಿಯ
ಪದಕೆ ಪತಿಯಹನಾತನೈ ಗೋರಕ್ಷ ಕೇಳೆಂದ ‖ ೪೬ ‖

ಜಾಣ ನುಡಿಗಳ ಬಿಡು ಗುಹೇಶ್ವರ
ನೀನೆಯಾದೊಡ ನಿನ್ನ ಕೈಯಲಿ
ದೇನು ಕುಱುಹಿನ ಲಿಂಗವಿದೆಯಿದಿರಿಟ್ಟು ಬೇಱೆನಿಸಿ[8]
ನೀನು ತಾ[9]ನಾಗಿದ್ದ ಒಳಿಕಲಿ
ದೇನು ಕಾರಣ ಕರ್ಮಭಕ್ತಿ
ಜ್ಞಾನದಾಯತದಿಂಗಿ[10]ತಂಗಳು ಗುರುವೆ ಹೇಳೆಂದ ‖ ೪೭ ‖

೧ ತಥ್ಯ [ಉ, ಜ] ೨ ತಹ [ಕ, ಜ] ೩-೩ ಯದು ತಾನಾಗುಹೇಶ್ವರನಾ [ಉ]
೪-೪ ನೆಂದಪ್ರಭುರಾಯ [ಇ] ೫ ಲಿಂಗ [ಗ] ೬ ಶು [ಬ, ಖ, ಚ,ಜ], ಸಿ
೭ ೭ ತೋರಿಸುತ [ಉ] ೮ ನೀ [ಗ, ಚ, ಮು] ೯ ಸದಾಯ [ಗ]

ಅಂಗವಿಸಿ ತಾನೀ ಪ್ರಕಾರದ
ಲಿಂಗನಿಷ್ಠೆಯನಾಖಿಳರಿಗೆ ಮು
ಕ್ತ್ಯಂಗನೆಯ ಮದುವೆಯನು ಮಾಡುವೆನೆಂದು ಕರುಣದಲಿ
ಹಿಂಗದೀ ಪರಿ ನಟಿಸಿದರೆಯೆನ
ಗಂಗಲಿಂಗಕೆ ಭೇದ ಭಾವದ
ಸಂಗವುಂಟೆಂದೆಂಬರೇ ಗೊರಕ್ಷ ಕೇಳೆಂದ ॥ ೪೮ ॥

ತೆತ್ತಿಸಿದ ಶಿವಲಿಂಗಭಕ್ತಿಯ
ಹೆತ್ತವೊಲು ವಚನಗಳ ನಾನೆಂ
ಬತ್ತು ಕೋಟಿಯ ಹಾಡಿಪೆನು ಹಲವಂದ ಛಂದದಲಿ
ತಧ್ಯವನು ಹೇಳುವೊಡೆ ಭಕ್ತರ
ಚಿತ್ತದಲಿ ಸುಜ್ಞಾನ ಬೀಜವ
ಬಿತ್ತಲೀ ಪರಿ ನಟಿಸಿದೆನು ಗೋರಕ್ಷ ಕೇಳೆಂದ ॥ ೪೯ ॥

ನಾನು ಮಾಡಿವೆನೆಂಬುದೊಂದನು
ಮಾನವನು ನಾ ನಟಿಸದಿದ್ದರೆ
ತಾನದೆಲ್ಲಿಯದೈ ಧರಿತ್ರಿಯ ಮೇಲೆ ಶಿವಭಕ್ತಿ
ಮಾನವರಿಗುಪಕಾರಿಯಾಗಿರ
ಲಾನು ಕೊಂಡಿದೆನೀ ಪ್ರಕಾರವ
ನಾನು ನಿರ್ಲೇಪನು ಕಣಾ ಗೊರಕ್ಷ ಕೇಳೆಂದ ॥ ೫೦ ॥

ಆವಪರಿಗಳಲಾರ ಬುದ್ಧಿಯ
ಭಾವವಿಹುದವರವರಿಗಾ ಪರಿ
ಭಾವವನು ಶುದ್ಧೈಸಿ ಸಮ್ಯಗ್‌ಜ್ಞಾನ ಜ್ಯೋತಿಯನು
ತೀವಿ ಸುಖಿಗಳ ಮಾಡಲೊಸುಗ
ವೀ ವಿನೋದದಲಿದ್ದೆನಿಂತು ನಿ
ರಾವಲಂಬನು ನಾನಲ್ಲೆ ಗೂರಕ್ಷ ಕೇಳೆಂದ ॥ ೫೧ ॥

೧ ಲ [ಪ ಗ], ಯೊಳ [ಉ] ೨. ಹೊ [ಇ, ಖ, ಗ] ೩. ನಾ, ಆ ಮು, ಪ್ರ. ಲೀ. ೧೩

ಅಱಿಯದವರಿಗೆ ಅಂಗಲಿಂಗದ
ತೆಱದಲಿಹೆ ನಾ ನಿನ್ನ ನೆಟ್ಟನೆ
ಯಱಿದ ಮಹಿಮಗೆ ಸಚ್ಚಿದಾನಂದಸ್ವರೂಪಾಸು
ಬಱಿಯ ಮಾತಲ್ಲಾ ದೊಡಿದ ಕೋ
ಕುಱುಹು ತೆಱಹಿಲ್ಲೆಂಬ ಪರಿಯನು
ನೆಱೆ ಪರೀಕ್ಷೆಯ ಕೊಂಬುಪೆನೆ ಗೋರಕ್ಷ ಕೇಳೆಂದ ॥ ೫೭ ॥

ತೊಳಪ ತೇಜದ ಮುಗಿಲು ಮಿಂಚನು
ಝಳಪಿಸುವವೊಲು ಕೈಯ ಕುಱುಹಿನ
ಬೆಳಗ ಬಿದಿರಿಸಲುದರದಂತಿದಸ್ಥೈಕ್ಯವಾಗಿರಲು
ಕಳೆದು ತುಡುಕಲು ಕೈಗೆ ಬಯಲಿನ
ಹೊಳೆಹದಾಗಿರೆ ಕಂಡು ಗುರುವಿನ
ನಿಲುಕಡೆಗೆ ಬೆಱಗಾಗುತಿರ್ದನು ಎಳಿಕೆ ಗೋರಕ್ಷ ॥ ೫೮ ॥

ಸಾಕು ಸಾಕಿನ್ನೆಲ್ಲಿತನಕ ವಿ
ವೇಕತನದಾಳಾಪವೆನಗಿ
ನ್ನೇಕೆ ನಿಮ್ಮಯ ಮಹಿಮೆಯನು ನೋಡುವೊಡನ್ನವೆ
ಕಾಕುತನಗಳು ಹೋಗಲೆನಗೆ ನಿ
ರಾಕುಳ ಶ್ರೀಸಂಗದಾಗ ದ
ಶೋಕೆಯನು ಕೃಪೆ ಮಾಡಬೇಹುದು ಪ್ರಭುವೆ ಕೇಳೆಂದ ॥ ೫೯ ॥

ಗುರುವೆ ತಾನೆಂಬಾತ ಶಿಷ್ಯನು
ಗುರುವೆ ಬೆನ್ನಾಗಿರೆ ಪರೀಕ್ಷಿಸಿ
ಗುರುಪದವ ಬಳಿಕಿತ್ತು ಶಿಷ್ಯತ್ವವನು ತಾ ಹಿಡಿವ
ಗುರುಕುಮಾರಕನಹನು ಓಟಪಾ
ಪರಿಯ ನಿನ್ನನು ಪರಿಕಿಸುವೆ ಸ
ತ್ಪುರುಷನಹುದೋ ನೀನೆ ದಿಟ ಗೋರಕ್ಷ ಕೇಳೆಂದ ॥ ೬೦ ॥

೫೭ ನಿನು ಎನ್ನನ ನೆರೆದ (ಇ) ೫೮ ಲ್ ಕುರುಹಿನಿಂದಲಿ (ಇ) ೫೯ ಬೀರುತೆಲಂತೆ (ಇ) ೬ ಲಿಂತರು (ಉ) ೨ ಪಡ (ಗ)

ಲಕ್ಷಿಸಿದನೀ ಪರಿಯಲಾ ಗೋ
ರಕ್ಷನಲಿ ಸಾಧಕತನಂಗಳ
ಲಕ್ಷಪರಿಯಲಿ ಬಳಿಕಲಾತನ ನೋಡಿ[1] ಕರುಣದಲಿ
ರಕ್ಷಿಸುವೆನೆಂದೆನುತ ಶೂನ್ಯದ
ಲಕ್ಷವನು ದೀಕ್ಷೆಯನು ಮಾಡಿದ
ಮೋಕ್ಷಮಾರ್ಗದಲಿಂದು ಗೋರಕ್ಷಂಗೆ ಪ್ರಭುರಾಯ || ೫೬ ||

ಪೊಂಗೆ ಪರಿಮಳವಿನಿದೆನಿಪ ಕ
ಬ್ಬಿಂಗೆ ತನಿವಣ್ಣಾದ ತೆಱದಲಿ
ಹಿಂಗದಾ ಗೋರಕ್ಷಗೀ ಪ್ರಭುಲಿಂಗನೊಲವಾಗೆ
ಮಂಗಳವೆ ನೆಲೆಯಾಯ್ತು ಮಾಯೆಯ
ಹಂಗು ಹಿಂಗಿತು ರಾಜಯೋಗದ
ಸಂಗ ಸಾಱಿತು ಬಳಿಕಲಾ ಗೋರಕ್ಷನಾಥಂಗೆ || ೫೭ ||

ಬಿದ್ದು ಹೋಯಿತು ಮನದ ಮಾಯಾ
ಬದ್ಧ ಭವಿತನ ನಿಮಿಷಮಾತ್ರಕೆ
ಹೊದ್ದಿ ಹೊಱಗೆಯೊಳಿಡುದು ಸಮ್ಯಗ್ಜ್ಞಾನಸಾರಾಯ
ಶುದ್ಧ ಸೂಕ್ಷ್ಮ ಸ್ಥೂಲಕಾಯವ
ಮೈದ್ದು[2] ಕಾರಣಕಾಯದಲಿ ತಾ
ನಿದ್ದ ನಿಜನ[3] ವಿಳಾಸ[4]ದಲಿ ಗೋರಕ್ಷ ಜಗನಱಿಯೆ || ೫೮ ||

ಕೋಡಿ ತುಂಬಿಯ ಬಡಪೆ ಸಸಿಹೊಡ
ನೋಡಲಾಕ್ಷಣ[5] ತುಂಬಿಯಾಗವೆ
ಜೋಡಿಯಱಿಯಲು ವಜ್ರತನು ಗೋರಕ್ಷ ನಿಮಿಷದಲಿ
ಮಾಡಿಕೊಂಡನು ಭಕ್ತಿಯಲಿ ಕೈ
ಗೂಡಿ ನಿರ್ಮಲಾಕಾಶಕಾಯವ
ಜೋಡಿಸಿಯನೆಮ್ಮಲ್ಲಮಪ್ರಭುಲಿಂಗಲೀಲೆಯಲಿ || ೫೯ ||

**ಅಂತು ಗತಿ ೧೭ಕ್ಕಂ ಪದ ೮೪೯ಕ್ಕಂ ಮಂಗಳಂ**

೧ ನೋಡಿದು (ಅ, ಇ, ಕ). ೨ ಗೆ (ಉ) ೩ ಸಿದ್ಧನಿರವೆ (ಅ, ಒ, ಕ, ಗ, ಚ)
೪. ನಿವಾಳ (ಉ) ನಿವಾಸ (ಇ) ೫ ಗಳೆ (ಕ)

## ೨೦ ಮುನಿಗಳಿಗೆ ಬೋಧಿಸಿದ ಗತಿ

**ಸೂಚನೆ**

ಸಾಧಕರು ಮೊದಲಾದ ವಿಷಯ
ವ್ಯಾಧಿಗತರಿಗೆ ತನ್ನ ಕರುಣಾ
ಮೋದಸುಧೆಯನು ಸುರಿದನೆಮ್ಮಯ ಗುರು ಗುಹೇಶ್ವರನು

ಜ್ಞಾನವನು ಗೋರಕ್ಷಗನುಸಂ
ಧಾನವೆನಿಸಿದೆ ಬಳಿಕ ತನ್ನ ಮ
ನೋನುರಾಗದಲಲ್ಲಮಪ್ರಭು ಲಿಂಗಲೀಲೆಯಲಿ
ಏನ ಮಾಡಿದ[1]ನೆಂಬ ಹದನ[2] ನಿ
ಧಾನಿಸುವುದು ಶಿವೈಕ್ಯಭಕ್ತಿಯ
ಮಾನಸಿಧಿಗಳು ಮುದದಲೀ ಪ್ರಭುಲಿಂಗಲೀಲೆಯಲಿ ॥ ೧ ॥

ಪ್ರೀತಿಯಲಿ ಗೋರಕ್ಷಗನುಪಮ
ನಾಥ ಪದವಿಯನಿತ್ತು ಬಳಿಕೊಲಿ
ದಾತನಲಿ ಗುರುಪೂಜೆಯನು ಕೈಕೊಂಡು ಕರುಣದಲಿ
ಭೂತಳದಲಜ್ಞಾನಿಗಳನಾ
ನೋಡಿತು ಸುಜ್ಞಾನಿಗಳ ಮಾಡುವೆ
ನಾತಗಳನೆಂದೆನುತಲಾ ಪ್ರಭುರಾಯ ಬರುತಿರ್ದ ॥ ೨ ॥

ಬರುತ ಬರುತಲಿ ತನ್ನ ಸಾಧಿಸಿ
ಕರುಣವನೆ ಸಲೆ ಪಡೆಯಬೇಕೆಂ
ದಿರುತಲಿಹ ಸಾಧಕತಪೋಧನರಾಶ್ರಮವ ಕಂಡು
ಹರುಷದಲಿ ಸುಜ್ಞಾನಧರ್ಮವ
ನೊರೆವೆನಿನ್ನೀತಗಳಿಗೆನುತಲಿ
ಗುರು ಗುಹೇಶ್ವರಲಿಂಗ ಬಂದನು ತನ್ನ ಲೀಲೆಯಲಿ ॥ ೩ ॥

೧-೧ ಹದನನೊಲಿದು (ಗ) ೨ ಸಿಂ ದೋ (ಉ), ನಿ ನ್ಯೂ (ಗ, ಜ)

ಸಾಧನೆಗೆ ನಾನಾಪ್ರಕಾರಗ
ಳಾದ ಬಗೆಗಳನೆಡೆವಿಡದೆ ಬೆಸ
ಲಾದ ಪುನಪಾಣಿಕವ ತಮ್ಮ ಶರೀರಶರಧಿಯಲಿ
ಸಾಧಿಸಿಯೆ ಶಿವನಾಣೆಯಲಿ ಸಲೆ
ತೇದು ಮಿಗೆ ಸುಜ್ಞಾನಕಾಂತಿಯ
ನೆಯ್ದಿಸುವುದನು ಪೇಳ್ದನಾ ಪ್ರಭು ತನ್ನ ಭಕ್ತರಿಗೆ ॥ ೪ ॥

ಮಿಱುವ ಮನವೆಂಬ ಮಣಿಯನು
ಕೊಱೆದು ನಿಷ್ಠಾವಜ್ರಸೂಚಿಯ
ಲುಱುವ ಜೀವಾನಿಲನ ದಾರವ ಹಿಡಿದು ಬೆಂಬಿಡದೆ
ನೆಱೆ ಶಿಖಾರತ್ನವನು ಮಾಡಿಯೆ
ಮೆಱೆವ ನಿತ್ಯಾನಂದಪದವಿಯ
೧ನಿಱೆಗೆಯನು ನಿಯಮಿಸಿದನಾ ಪ್ರಭುಲಿಂಗ ಭಕ್ತರಿಗೆ೧ ॥ ೫ ॥

ಲಿ೨ಪ್ಪವಿಲ್ಲದೆಯೂರ್ಧ್ವಬಿಂದುನೆ
ನಿಪ್ಪ ಪಶ್ಚಿಮವಾಹಿನಿಯಲಿಂ
ತೊಪ್ಪದಿಂದಲಿ ಮಿಂದು ಮೀಱಿದ ಮೂಲನಾದವನು
ಅರ್ಪಿತಾ ಪ್ರಾಣ೩ಸ್ವರೂಪದ
ಸುಪ್ರಭೆಯಲಿಹ ಸುಖವನಿತ್ತನು
ತಪ್ಪದಾ ಸಾಧಕತಪೋನಿಧಿಗಳಿಗೆ ಪ್ರಭುರಾಯ ॥ ೬ ॥

ಬಳಿಕಲಾ ಸಾಧಕತಪೋನಿಧಿ
ಗಳಿಗೆ ನಿರುಪಮ ನಿಃಪ್ರಪಂಚಿನ
ನೆಲೆಯ ನೆಟ್ಟನೆ ಕೊಟ್ಟು ತಾನಲ್ಲಿಂದ ನಡೆಗೊಂಡು
ತಳಿತ ತರುಲತೆ ಗುಲ್ಮತೃಣಸಂ
ಕುಲವ೪ ಚರಿಸುವ ಖಗಮೃಗದ ಕಳೆ
ಕಳೆದ ಕಾನನಮಧ್ಯದಲಿ ಬರುತಿರ್ದ ಪ್ರಭುರಾಯ ॥ ೭ ॥

೧-೧. ಲಿರಿಸುವುದ ಬೋಧಿಸಿ ಸನೆಮ್ಮಯ ಗುರು ಗುಹೇಶ್ವರನು (ಇ) ೨ ಒ ಆ ಪೆ (ಇ) ೩ ಪ್ರಣಮ (ಬ, ಕ) ೪ ದಿ (ಇ, ಉ, ಖ, ಗ)

ಕೊಲುವುದನೆ ಸಲೆ ಕೊಂದು ಹಸಿವಿನ
ಕೊಲೆಯನಳಿಯದೆ ನಾಡನಾಯ್ಗಳ
ಒಳಿವಿಡಿದು[1] ನಾನಾ ಪ್ರಕಾರದ ಜೀವಜಾಲವನು
ಅಳಿದು ಕೊಟ್ಟೆಯ ಹೊರೆದು ದುರ್ಗತಿ
ಗಿಳಿವ ಲುಬ್ಧನನಂದು ಕಾನನ
ದೊಳಗೆ ಕಂಡನು ಕರುಣದಿಂದಾ ಪ್ರಭು ಸಮೀಪದಲಿ ||೮||

ತನ್ನ ಕಣ್ದಿದಿರಾದ ಮೂಢನ
ನಿನ್ನು ತಿಳುಹದೆ ನಾನು ಹೋಹುದು
ನನ್ನ ಹೆಮ್ಮೆಗೆ ಕೊರತೆಯೆನುತ ಕಿರಾತಗೊಲವಿನಲಿ
ತನ್ನ ಕರುಣದ ಸಿದ್ಧರಸ ಕಾ
ಬೋನ್ನಿನಂದದ ಖಳನನೊಳ್ಳಿಹ
ಹೊನ್ನ ಮಾಡಲಿ ಬೇಹುದೆನುತಾ ಪ್ರಭು ನಿರೀಕ್ಷಿಸಿದ ||೯||

ನೆಲಸಿದಾಹಂಕಾರಮೃಗವನು
ಸುಲಲಿತಾಂತಃಕರಣಮುಸಕನ
ಬಳಿನಲಿಸಿ ಮಾರುತಶರಾಸನವನು ದೃಢೀಕರಿಸಿ
ಚಲಿಸದೇಕೋಭಾವಶರದಲಿ
ಕೊಲುವ ಭೇದವನಾತ್ಮತೃಪ್ತಿ[2]ಗೆ
ನಿಲುವೆ ನಿಜಾಗೆಯ ಮೇಲ್ದನಾ ಪ್ರಭು ಬೇಂಟೆಕಾಱಂಗೆ ||೧೦

ಉಸುರುವಲ ಮೃಗಾಡು ಬುದ್ಧಿಯ
ಬಸುಗೆ ಕೈ ನಿಶ್ಚಲದ ಮನವೇ
ಮಿಸುಪ ಕಂಗಳ್ ತಿಳಿವೆ ಲುಬ್ಧಕನಾಗಿ ಹೆಮ್ಮೆಂಬ
ಅಸಮಖಗಮೃಗ ಜಲಚರವನೊ
ಡಸುತ ಸುಜ್ಞಾನಾಗ್ನಿಯಲಿ ಪಚ
ನಿಸಿಯ ದಣಿಯುಣಕಲಿಸಿದನು ಪ್ರಭು ಬೇಂಟೆಕಾಱಂಗೆ ||೧೧||

೧ ವಿಡಿದು (ಬ ಕ) ೨ ತುಷ್ಟಿ (ಇ)

ಈ ಪರಿಯಲಾ ಸರ್ವಜ್ಞನದ
ಯಾಪರವನುಪದೇಶಿಸಿಯೆ ನಿ
ರ್ಲೇಪದಲಿ ನಿಲಿಸಿದ ಪುರಾತನನಾ ಕಿರಾತಂಗೆ
ಆ ಪರವ ನೆಱೆಯಱುಪಿ ನಿತ್ಯ
ಶ್ರೀಪದವನೊಲಿದಿತ್ತು ತೆರಳಿದ
ನಾ ಪರಬ್ರಹ್ಮಸ್ವರೂಪ ಪ್ರಭು ವಿನೋದದಲಿ ॥ ೧೬ ॥

ಕಾಮಿನಿಯರಿಗೆ ಸೋತು ಕಾಮನ
ಸೀಮೆಯಲಿ ಸಲೆ ಸತ್ತು ಹುಟ್ಟುವ
ಕಾಮಿಗಳಿಗಾ ಕುಂಡಲಿ(ಶಕ್ತಿ)ಯ(೧)ಸುಹಾರತಿಯ
ನೇಮಿಸಿಯೆ ನಿರ್ವಾಯದಲಿ ನಿ
ಸ್ಸೀಮನಿತ್ಯಾನಂದಸುಖದು
ದ್ದಾಮತೆಯನೊಲಿದಿತ್ತನಾ ಪ್ರಭುಲಿಂಗ ಕೆಲಬರಿಗೆ ॥ ೧೭ ॥

ರಸದ ಸಿದ್ಧಿಯ(೨)ನಸಿನೆಯಱಿಯದೆ
ವ್ಯಸನ(೩)ವಿಧಿಯಲಿ ಸತ್ತುಹುಟ್ಟುವ
ಪಶುಗಳಿಗೆ ಬಳಿಕಂತರಂಗದ ಬಿಂದುಸೆಂವೆಂಬ
ರಸವ ಕಟ್ಟಿ ಭಯಂಗಳನು ವ
ರ್ಜಿಸುವ ಪರಿಯನು ಕೆಲಬರಿಗೆ ಬೋ
ಧಿಸಿದನೆಪ್ಪ(೪)ಯ ಗುರು ಗುಹೇಶ್ವರಲಿಂಗ ಲೀಲೆಯಲಿ ॥ ೧೮ ॥

ಬಿಂದುವೇ ರಸವೌಷಧಿಯು ನಿ
ಷ್ಪಂದವಾಯು ಮನಸ್ಸು ಮೂಷಿಕ
ನಂದ ಮಣಿಪೂರಕವೆ ಕಿಚ್ಚು ನ್ಮಸಿಯೆ ರಸಘುಟಿಕ
ಮುಂದೆ ರುದ್ರೇಶ್ವರ ಸದಾಶಿವ
ರಿಂದ ಮೀಱಿದ ಸುಖದ ಸಿದ್ಧಿಗ
ಳೆಂದು ನಿಯಮಿಸಿ ಕೆಲರನಾ ಪ್ರಭು ಸಿದ್ಧನೆನಿಸಿದನು ॥ ೧೯ ॥

(೧. ಸ್ಥಾನದ ಅ, ಕ) ೨-೨ ಸರಿಯ ದುಪ್ಯೋಗಿಸಿದ ( ಬ, ಪ, ಗ), ಸೇವೆಯರಿದು
ದ್ವೇಶ (ಉ)

